# ಅರಿಕೆ

" ಬಳ್ಳಾರಿಯ - ಬೆಳಗು " ನನ್ನ ಮೊದಲನೆಯ ಕವನ ಸಂಗ್ರಹ. ಇದರಲ್ಲಿ ಪ್ರೇಮಗೀತೆಗಳೇ ಹೆಚ್ಚು. ನನ್ನ ಕೆಲವು ಕವನಗಳನ್ನು ಈ ಮುಂಚೆ ಕನ್ನಡ ಜನತೆಯ ಮುಂದಿಟ್ಟ ಪತ್ರಿಕೆಗಳ ಸಂಪಾದಕರುಗಳಿಗೆ ಋಣಿಯಾಗಿದ್ದೇನೆ.

ನನ್ನ ಬೇಡಿಕೆಗೆ ಕಿವಿಗೊಟ್ಟು, ಬಹಳ ಮಮತೆಯಿಂದ 'ಬಳ್ಳಾರಿಯ - ಬೆಳಗಿಗೆ' ಮಂಗಳವನ್ನು ಕೋರಿ ಆಶೀರ್ವದಿಸಿದ ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯನವರಿಗೆ ನನ್ನ ಹೃತ್‌ಪೂರ್ವಕವಾದ ವಂದನೆಗಳನ್ನು ಸಮರ್ಪಿಸುತ್ತೇನೆ. ನನ್ನಲ್ಲಿ ಕನ್ನಡದ ಒಲೆ ಹಾಯಿಸಿದ ಕೊಟ್ಟೂರಿನ ಶ್ರೀಮಾನ್ ಗೊರ್ಲಿ ಶರಣಪ್ಪನವರಿಗೆ ನಾನು ಋಣಿ. ನನ್ನ ಉದ್ಯಮದಲ್ಲಿ ಸತತ ಪ್ರೋತ್ಸಾಹವೀಯುತ್ತಲಿರುವ ಪೂಜ್ಯರಾದ ಎಂ. ಗುರುಸಿದ್ಧಯ್ಯನವರಿಗೆ ನಾನೆಷ್ಟುಸಲ ವಂದಿಸಿದರೂ ಕಡಿಮೆಯೇ.

ನನ್ನ ಕವನಗಳ ಬಗ್ಗೆ ಹೆಚ್ಚಿಗೆ ಹೇಳಬಯಸುವುದಿಲ್ಲ. ಬೆಳಗಿನ ಸಮಯದಲ್ಲಿ - ಸೌರಭವನ್ನು ಬೀರುವ ಮತ್ತು ಬೀರದ - ಎಲ್ಲಾ ತರದ ಕುಸುಮಗಳು ಅರಳುತ್ತಿವೆ ಎಂಬುದನ್ನು ಯಾರೂ ಒಪ್ಪಿಕೊಳ್ಳಬೇಕು! ಸರಿ. " ಕಣ್ಣೋದಿಗಿಂತ ಕೊರಳೋದು " ಒಳಿತೆಂದು ಸೂಚಿಸ ಬಯಸು ತ್ತೇನೆ. ಯೋಚಿಸಿ ನೋಡಿದಲ್ಲಿ (ನಿಜವಾದ ಅರ್ಥದಲ್ಲಿ) ಪ್ರಗತಿಯೂ ಕಂಡುಬಂದೀತು! ಪ್ರೇಮಗೀತೆಗಳೆಂದರೆ ಮೂಗು ಮುರಿಯಬಹುದಾದ ಕೆಲವರಿಗೆ ಯಾವ ಬಗೆಯ ತಕರಾರೂ ಇಲ್ಲ. ಯಾವ ಪದ್ಯವನ್ನೇ ಆಗಲಿ 'ಏನಿರಬಹುದು!' ಎಂದುಕೊಂಡು ಓದಿದರೆ ಕವಿಯ ಕಾರ್ಯ ಫಲವನ್ನು ಕಂಡೀತು. ಒಂದು ಮಾತು; ಗಂಡನು ಹೆಂಡತಿಗೆ ಕೊಡಬಹುದಾದ - ನಿಜವಾದ - ಒಡವೆಗಳಾವುವೆಂಬುದನ್ನು 'ನಸು ಮುನಿಸು' ಕವನದಲ್ಲಿ ಕಾಣಬಹುದು. ಸಮಾಜದಲ್ಲಿನ ಕೆಡಕುಗಳನ್ನು ತೊಡೆದು ಹಾಕಲು ಸಾಹಿತ್ಯವೂ ಒಂದು ಮಾರ್ಗವೆಂದಾದರೆ, ನನ್ನ ಕವನಗಳ ಹೆಜ್ಜೆಗಳನ್ನು

ಆ ಹಾದಿಯಲ್ಲಿ ಕಾಣಬಹುದು. ಒಬ್ಬ ರಸಿಕರು ‘ ನಿಮ್ಮ ಕವನಗಳಲ್ಲಿ ವಿಡಂಬನೆಯೂ ಕಂಡುಬರುತ್ತೆ’ ಎಂದರು. ‘ ಇದ್ದರೂ ಇರಬಹುದು!’ ಎಂದೆ.

ಕಾಗದ ಮತ್ತು ಮುದ್ರಣದ ತುಟ್ಟಿಯ ಈ ಕಾಲದಲ್ಲಿ ‘ ಬಳ್ಳಾರಿಯ - ಬೆಳಗನ್ನು’ ಬೆಳಕಿಗೆ ತಂದ ಬ್ರದ್ರನ್ ಸಂಸ್ಥೆಯವರನ್ನು ಮನಸಾರೆ ವಂದಿಸುತ್ತೇನೆ. ಈ ಕಾರ್ಯದಲ್ಲಿ ಬಹು ಶ್ರಮವಹಿಸಿದ ಶ್ರೀ. ಎನ್. ನಾರಾಯಣಸ್ವಾಮಿ, ಬಿ. ಎ. ಇವರಿಗೆ ಋಣಿಯಾಗಿದ್ದೇನೆ.

ಸುಂದರವಾದ ಚಿತ್ರಗಳನ್ನು ಬರೆದುಕೊಟ್ಟು, ಪುಸ್ತಕಕ್ಕೆ ಶೋಭೆಯನ್ನುಂಟು ಮಾಡಿದ ಬೆಂಗಳೂರಿನ ಸುಪ್ರಸಿದ್ಧ ಚಿತ್ರಕಾರರಾದ ಶ್ರೀಮಾನ್ ಪುರುಷೋತ್ತಮರಾಯರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಅನೇಕ ಕಾರ್ಯಗಳನ್ನು ಬದಿಗೊತ್ತಿ, ಶೀಘ್ರವಾಗಿಯೂ, ಸುಂದರವಾಗಿಯೂ, ಮುದ್ರಿಸಿಕೊಟ್ಟ ಓಂಕಾರ್ ಪ್ರೆಸ್ಸಿನ ಒಡೆಯರಾದ ಶ್ರೀ ಬಿ. ಎಸ್. ನಾರಾಯಣರಾಯರನ್ನು ಮರೆಯಲಿಕ್ಕಾಗುವುದಿಲ್ಲ.

“ ಬಳ್ಳಾರಿಯ - ಬೆಳಗು ” ಸರ್ವಾಂಗ ಸುಂದರವಾಗಿ ಬೆಳಗಲಿ ’ ಎಂದು ಹಾರೈಸಿದ ಗೆಳೆಯರಿಗೆಲ್ಲ ತುಂಬಾ ಋಣಿಯಾಗಿದ್ದೇನೆ.

ಕನ್ನಡ ಜನತೆ ‘ ಬೆಳಗನ್ನು’ ಬರಮಾಡಿಕೊಂಡು ಮೆಚ್ಚಿಕೊಂಡರೆ, ನನಗೆಷ್ಟು ಸಂತೋಷ! ಬರಬಹುದಾದ ಸೂಕ್ತಸಲಹೆಗಳನ್ನು ಕಿರಿಯನೂ, ವಿದ್ಯಾರ್ಥಿಯೂ ಆದ ನಾನು ಆದರದಿಂದ, ಶಿರಬಾಗಿ, ಕೈಚಾಚಿ ಸ್ವಾಗತಿಸುತ್ತೇನೆ.

ಹಿರೇಕುಂಬಳಗುಂಟೆ, ಬಳ್ಳಾರಿ ಜಿಲ್ಲ
೧೦–೮–೧೯೪೮

ಹಿ. ಮ. ನಾಗಯ್ಯ.

# ದಾರಿ - ಮಾತು

"ಬಳ್ಳಾರಿಯ - ಬೆಳಗು" - ಇದೊಂದು ಕವನಮಾಲೆ. ಕವಿ ಹಿ. ಮ. ನಾಗಯ್ಯನವರು ಈ ಕವನಮಾಲೆಯನ್ನು ಅಂದವಾಗಿ ಕಟ್ಟಿರುತ್ತಾರೆ. ಇದು ಮುನ್ನುಡಿಯಲ್ಲ; ಸವಿನುಡಿ. ಇದು ವಿಮರ್ಶೆಯಲ್ಲ; ಹಿತೋಕ್ತಿ. ಆಪ್ತವಚನವಲ್ಲ; ದಾರಿ - ಮಾತು!

ಕವಿವಾಣಿ ಕವಿಹೃದಯದಿಂದ ಹೊರಡುವ ಅಮರವಾಣಿ! ಕವಿತಾ ವಾಹಿನಿ ಕವಿಯ ಭಾವೋನ್ನತ ಗೌರೀಶಂಕರ ಶಿಖರದಲ್ಲಿ ಆವಿರ್ಭವಿಸುವ ಪುಣ್ಯಗಂಗಾವಾಹಿನಿ! ರವಿ ಉದಯವಾದಲ್ಲಿ ಭೂಮಿಯ ಮೇಲೆ ಬೆಳಕು ಹೊಳೆಯುತ್ತದೆ. ಕವಿಯ ಪ್ರತಿಭಾಸೂರ್ಯನ ಬೆಳಕು ಲೋಕಹೃದಯದ ಮೇಲೆ ಬೆಳಗುತ್ತದೆ. ರವಿ ಪ್ರಕೃತಿವಿಹಾರಿ; ಕವಿ ಪ್ರಕೃತಿ ಸೌಂದರ್ಯವಿಹಾರಿ! ಕವಿ ಪ್ರಕೃತಿಯನ್ನೂ ನೋಡಬಲ್ಲ! ಪ್ರಕೃತಿ ಸೌಂದರ್ಯವನ್ನೂ ನೋಡಬಲ್ಲ! ಅಷ್ಟೇ ಅಲ್ಲ. ನೋಡಿ ತಣಿಯಬಲ್ಲ; ತಣಿದು ಹಾಡಬಲ್ಲ; ಹಾಡಿ ಆನಂದಿಸಬಲ್ಲ. ಕವಿಯ ಕಾವ್ಯ ತಪಸ್ಸು ಪ್ರಖರವಾದಷ್ಟೂ ಪ್ರತಿಭಾಜ್ಯೋತಿರ್ಮಂಡಲ ಭಾನುಕೋಟಿಯಂತೆ ಬೆಳಗುತ್ತದೆ. "ನವನವೋನ್ಮೇಷಶಾಲಿನೀಪ್ರತಿಭಾ" ಎಂಬ ಮಾತು ಸತ್ಯ. ಪ್ರತಿಭೆಯೇ ಕವಿಯ ಸೌಭಾಗ್ಯ. ಪ್ರತಿಭೆಯಿಲ್ಲದ ಕವಿತೆ ಚಿತ್ರದಲ್ಲಿ ಕಾಣುವ ನದಿಯಂತೆ! ಪ್ರತಿಭೆಗೆ ಸಿಲುಕದ ವಸ್ತುವಿಲ್ಲ; ನಿಲುಕದ ಸ್ಥಾನವಿಲ್ಲ. ಪ್ರತಿಭೆಯ ಸ್ಪರ್ಶದಿಂದ ಮಣ್ಣು ಹೊನ್ನಾಗುತ್ತದೆ; ಮಾನವ ಮಹಾದೇವನಾಗುತ್ತಾನೆ; ಭೂಮಿ ಸ್ವರ್ಗವಾಗುತ್ತದೆ; ಅಚೇತನ ಚೇತನವಾಗುತ್ತದೆ! ಪ್ರತಿಭೆ ಪ್ರಾಣಸಂಜೀವಿನಿ; ಪರಮಚಿಂತಾರತ್ನ! ಕವಿಹೃದಯ ಪರಿಪಕ್ವವಾದಂತೆ ಕಾವ್ಯರಸಗಂಗೆ ಚಿಮ್ಮಿಬರುತ್ತಾಳೆ. ಅದರಿಂದಲೇ ಕವಿ ಮಹಾ ಯೋಗಿಯಂತೆ ಅಂತರ್ಮುಖಿಯಾಗಬೇಕು. ಆಗಲೇ ಸತ್ಯ - ಸೌಂದರ್ಯಗಳು ಅವನ ಒಳಗಣ್ಣಿಗೆ ಗೋಚರವಾದಾವು! "ನಾ ಋಷಿಃ ಕುರುತೇ ಕಾವ್ಯಂ" ಎಂದು ರಸಾನುಭವಿಗಳು ಹೇಳಿದ್ದಾರೆ.

ಕ ವಿ ತಾ ಶ ಕ್ತಿ ಸ್ವಭಾವ ಜನ್ಯವಾದುದು. ಕವಿ ಕವಿತಾ ಸಿದ್ಧಿಯನ್ನು ಪಡೆಯಲು ಸಾಧಕನಾಗಬೇಕು. ನಾನಾ ಭಾವತರಂಗಗಳು ಕವಿಹೃದಯ ಸಾಗರದ ಮೇಲೆ ಮೂಡುತ್ತಿರುತ್ತವೆ. ಪ್ರತಿಭಾ ಪರುಷ ಸ್ಪರ್ಶದಿಂದ ಒಂದೊಂದು ಭಾವತರಂಗವೂ ಒಂದೊಂದು ಕಾವ್ಯ ಭಾಗೀರಥಿಯೇ ಆದೀತು! ಅದರಿಂದಲೇ ಕವಿಯಲ್ಲಿ ಭಗೀರಥನಿಷ್ಠೆ ತುಂಬಿರಬೇಕು. ಸಿದ್ಧ ಕವಿ ವಿರಾಡ್ರೂಪಿ! ಸಹಸ್ರಾಕ್ಷ! ಸೃಷ್ಟಿದೇವಿ ಆ ಕವಿಯ ಕೈಯಲ್ಲಿ ಹಸುಗೂಸಿನಂತೆ ನಲಿದಾಳು! ಕವಿ ನಿತ್ಯ ಮುಕ್ತ! ಅವನಿಗೆ ಬಂಧನವಿಲ್ಲ. ಅವನನ್ನು ನಿರ್ಬಂಧಿಸಲೂ ಬಾರದು. ಕವಿ ತಾನೇ ತಾನಾಗಿ ಹಕ್ಕಿಯಂತೆ ಹಾಡುತ್ತಾನೆ. ಹಾಡಿ, ಲೋಕವನ್ನೂ ಆನಂದ ಪಡಿಸುತ್ತಾನೆ.

ಲೋಕಜೀವನದ ಸ್ವಾರಸ್ಯವನ್ನು - ಸೌಂದರ್ಯವನ್ನು - ತಿಳಿಯುವ ಶಕ್ತಿ ಮನುಷ್ಯನಿಗೆ ಮಾತ್ರವಿದೆ. ಈ ಲೋಕಜೀವನದಲ್ಲಿ ಪ್ರೇಮ ತುಂಬಿ ತುಳುಕುತ್ತಿದೆ. ಪ್ರೇಮವಿಲ್ಲದ ಜೀವನ ಬರಡು. ಅದನ್ನು ಕಂಡರಿಯುವಶಕ್ತಿ ಲೋಕಸಾಮಾನ್ಯದಲ್ಲಿಯೂ ಇದೆ. ಆದರೆ, ಅದು ಕವಿಯ ಕಣ್ಣಿಗೆ ಗೋಚರಿಸಿದಂತೆ; ಮನಸ್ಸಿಗೆ ಹೊಳೆದಂತೆ ಅನ್ಯರ ಕಣ್ಣಿಗೆ ಗೋಚರಿಸಲಾರದು. ಜೀವನದಲ್ಲಿ ಹೆಣ್ಣು ಪ್ರೇಮಾಕರೆ. ಅಷ್ಟೇಕೆ, ಆಕೆ ಲೋಕಮಾಯೆಯೂ ಹೌದು. ಈ ಮಾಯೆಯ ಮಬ್ಬಿನ ಹಿಂದೆ ಹೆಣ್ಣು ಉಷಾದೇವಿಯಂತೆ ಮಂಗಳಸ್ವರೂಪಿಣಿಯೂ ಆಗಿದ್ದಾಳೆ; ಗೌರಿದೇವಿಯಂತೆ ಲೋಕಮಾತೆಯೂ ಆಗಿದ್ದಾಳೆ. ಅವಳನ್ನು ಅರಿತರೆ ಸೌಂದರ್ಯ ವಿಲಾಸಿನಿ; ಮರೆತರೆ ಮಹಾಕಾಳಿ! ಹೆಣ್ಣಿನ ನಡೆ, ನುಡಿ, ಬೆಡಗು, ಬಿನ್ನಾಣ, ನಗು, ಲಜ್ಜೆ, ಕೊಂಕು, ಬಿಂಕ, ಒನಪು, ವಯ್ಯಾರ, ಸಿಡುಕು, ಸ್ನಿಗ್ಧತೆ, ರತಿ, ವಿರತಿ - ಇವು ಒಂದೊಂದೂ ಕವಿಯ ಕಣ್ಣಿಗೆ ಅಂದ! ಈ ನಾನಾ ಭಾವರೂಪಗಳಲ್ಲಿ ಆಕೆ ಪ್ರಣಯಿನಿಯಂತೆ ಕಂಡಾಗಲೇ ಪುರುಷಹೃದಯದಲ್ಲಿ ಶೃಂಗಾರಲಹರಿ ಪ್ರವಹಿಸುತ್ತದೆ. ಪ್ರಣಯಿ ಅವಳನ್ನು ಕಾಣಬಯಸುತ್ತಾನೆ, ಮಾತನಾಡಿಸಲು ಬಯಸುತ್ತಾನೆ; ಸಾನ್ನಿಧ್ಯವನ್ನು ಅಪೇಕ್ಷಿಸುತ್ತಾನೆ. ಅವನ ಕನಸುಮನಸಿನಲ್ಲಿಯೂ ಆ ಒಲಿದ ಹೆಣ್ಣೇ ಸುಳಿಯುತ್ತಾಳೆ. ಕವಿ ಈ ವಿವಿಧ ಭಾವಗಳನ್ನೆಲ್ಲ ತನ್ನ

ಪ್ರತಿಭೆಯ ಬಲದಿಂದ ಹಾಡುತ್ತಾನೆ. ಇವೇ ಪ್ರೇಮಗೀತೆಗಳು. ಕವಿಗೆ ಸ್ವಾನುಭವವಿದ್ದರೆ ಈ ಗೀತೆಗಳಲ್ಲಿ ಮಾಧುರ್ಯ ಹೆಚ್ಚು. ಶ್ರೀ. ನಾಗಯ್ಯ ನವರು ಇಂತಹ ವಿವಿಧ ಭಾವಗೀತೆಗಳನ್ನು ಮನೋಜ್ಞವಾಗಿ ಹಾಡಿರುತ್ತಾರೆ.

ಶ್ರೀ. ನಾಗಯ್ಯನವರು ತರುಣಕವಿ. ಅವರ ಹೃದಯದಲ್ಲಿ ಕಾವ್ಯ ತೇಜಸ್ಸಿನ ಅನಂತಶಕ್ತಿ ಅಡಗಿದೆ. ಅದು "ಬಳ್ಳಾರಿಯ - ಬೆಳಗು" ರೂಪ ದಲ್ಲಿ ಕಂಡುಬರುತ್ತಿದೆ. ಅವರ ಕಾವ್ಯ ತಪಸ್ಸು ಬೆಳೆದಂತೆ ಈ ಅನಂತ ಶಕ್ತಿ ಮಹಾಜ್ಯೋತಿಯಾಗಿ "ಲೋಕದ - ಬೆಳಗು" ಆಗುವುದರಲ್ಲಿ ಸಂದೇಹವಿಲ್ಲ.

"ಸತ್ಯವನು ಕಾಣುವಡೆ ಎತ್ತರೆತ್ತರಕೇರಿ, |
ಹೊರನೋಟಕುಂ ವಿರಾರಿ ಹರಿಸು ಒಳನೋಟಮಂ"

ಎಂದು ಶ್ರೀ. ನಾಗಯ್ಯನವರು ಕವಿವಾಣಿಯಿಂದ ಅವರ ಕವಿ ಜೀವನ ಭವಿಷ್ಯವನ್ನು ಅವರೇ ನುಡಿದಿರುತ್ತಾರೆ. ಈ ಬಯಕೆ ಸಿದ್ಧಿಸಲಿ.

"ಬೆಳಗಾಯ್ತು! ಬೆಳಗಾಯ್ತು! ಬಂದನಹಹಾ ಬಂದ!
ಬಾಲ ಭಾಸ್ಕರ ತನ್ನ ಲಕ್ಷ ಕರಗಳ ಚಾಚಿ"

ಎಂಬ ಈ ಕವಿಯ ಪ್ರಭಾತ ತೂರ್ಯ ಲೋಕಕ್ಕೆ ಕೇಳಿಸುತ್ತಿದೆ. ಈ ಬಾಲ ಭಾಸ್ಕರ ಪ್ರಚಂಡ ಭಾಸ್ಕರನಾಗಲಿ! ಈ "ಬಳ್ಳಾರಿಯ - ಬೆಳಗು" ಕನ್ನಡ ಸಾಹಿತ್ಯದ ಮುಂಬೆಳಗಾಗಿ ನಲಿಯಲಿ; ಲೋಕವನ್ನು ತಣಿಸಲಿ; ರಸಿಕರನ್ನು ಮೆಚ್ಚಿಸಲಿ. ಕಿರಿಯರನ್ನು ನಲಿಸಲಿ. ಹಿರಿಯರು ಇದನ್ನು ಮೆಚ್ಚಿ ಆಶೀರ್ವದಿಸಲಿ.

ಶ್ರೀ ಗೌರೀವಿಹಾರ
ನಂ. ೧೦, ಮಾವಳ್ಳಿ - ಬೆಂಗಳೂರು

ಓ. ಎಲ್. ಲಿಂಗಣ್ಣಯ್ಯ.

ಹದಿನಾರ್ ವರ್ಷದ ಹುಡುಗನ ಹುಡುಕಿ
ಬಂದಳು ಕವಿತೆಯ ಹೆಣ್ಣಾಗ,
ಹೂಮಾಲೆಯು ತೋಳ್ ತೆಕ್ಕೆಯು ಬಿಗಿಯೆ
ಸಿಕ್ಕೆನು ಚಿಕ್ಕವ ನಾನಾಗ!!
ಚುಂಬಿಸಿದಳು ಎಲ್ಲೆಲ್ಲಿಗೊ ಕಾಣೆ.
ಮೈ ತುಂಬಿತು, 'ನಿಮಿರೆದ್ದ ಕಣೆ!'
ಬೆದರಿದೆ, ಬೆಕ್ಕಸಗೊಂಡೆನು ಮೊದಲು
'ಛೇ! ಏತಕೆ, ಇದೆ ಕಾವ್ಯದ ಹೊನಲು!'
ಇಂದಿಗೆ ಕಳೆಯಿತು ಆರನೆ ವರ್ಷ
ದಿನದಿನಕೂ ಇಮ್ಮಡಿ ಹರ್ಷ!!

ಓಂ

ಜಗದ ಬೆಳಕ ಕಾಣಗೊಟ್ಟ
ಬಾಳ ಬೆಳೆಗೆ ಜೀವ ಕೊಟ್ಟ
ತೀರ್ಥರೂಪುಗಳಾದ

ನನ್ನ

ತಂದೆ — ತಾಯಿ

**ದೊಡ್ಡ ಬಸವಯ್ಯ** — **ದೊಡ್ಡ ಬಸವಮ್ಮ**

ಇವರ
ಅಡಿದಾವರೆಗಳಲ್ಲಿ
ಅರ್ಪಿತವೀ
**ಬೆಳಗು**

# ತಿದ್ದುಪಡಿ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೮ | ೧೦ | ಕುಣಿಯುವಿ | ಕುಣಿಯುವಿ |
| ೨೩ | ೧೭ | ಹಿಡಿಸುವಿಯುಂಕ | ಹಿಡಿಸುವಿಮುಂಕ |
| ೫೩ | ೧೭ | ಆವು | ಆವು |

ಮೂವತ್ತನಾಲ್ಕನೇ ಪುಟದಲ್ಲಿ 'ನಿನ್ನೆಯ ರಾತ್ರಿಯ' ಎಂಬುದನ್ನು ಮೊದಲನೆಯ ಪಂಕ್ತಿಯಾಗಿ ಓದಿಕೊಳ್ಳಬೇಕಾಗಿ ಸವಿನಯ ಪ್ರಾರ್ಥನೆ.

# ಪ ರಿ ವಿ ಡಿ

# ಬಳ್ಳಾರಿಯು - ಬೆಳಗು

ವಿಧವಿಧ ಹೂಗಳು
ಅರಳಿವೆ ಇಲ್ಲಿ
ಈ ಬಳ್ಳಾರಿಯ ಬೆಳಗಿನಲಿ!
ಚೆಲ್ಲಿವೆ ಮಂಜಿನ
ಮುತ್ತುಗಳೆಲ್ಲ
ಪ್ರಕೃತಿಯ ದೇವಿಯ ಸೆರಗಿನಲಿ.

ಶುಕ, ಪಿಕ ಸೋಗೆ-
ಗಳುಲಿಯುವವಿಲ್ಲಿ
ಇಂಪಿನ ಸೊಂಪಿನ ಬೆಳಗಿನಲಿ.
ಅರಳಿವೆ ಮಲ್ಲಿಗೆ,
ಸಂಪಿಗೆ, ಜಾಜಿ,
ಸೇವಂತಿಗೆ, ಗಿರಿದಾವರೆ ಕಮಲ;

ಎಕ್ಕೆಯ ಲಕ್ಕಿಯ
ಕಕ್ಕೆಯ ಹೂವು
ಅರಳಿರ್ದರೆ ಅದು ಸೋಜಿಗವಲ್ಲ!
ರಸಿಕನು ರಸವನು
ಸವಿಯಲು ಬಲ್ಲ
ಬೆಳಗದು ಮನಸಿನ ತೊತ್ತಲ್ಲ!!

# ಕೃಪೆದೋರು

ಕನ್ನಡಾಂಬೆಯೆ ತೋರೆಯೆಮಗೆ
ನಿನ್ನ ಕರುಣೆಯ ಬೀರೆಯೆಮಗೆ
ಚೆನ್ನೆ ನೀನು ಕೃಪೆಯದೋರದೆ
ಇನ್ನು ಬಾಳ್ವವದೆಂತು ನಾವ್—

ಹಲವು ವರುಷದಿ ಮೆರೆದ ತಾಯೆ
ಚೆಲ್ವುವ ಮಕ್ಕಳ ಪಡೆದ ತಾಯೆ
ಬಳಲಿ -ಇಂದು ಕುಳಿತಿಯೇಕೆ
ನಿಲದೆ ಎಮ್ಮಗೆ ಪೇಳ್ವೆಯ ?—

ಅಕ್ಕತಂಗಿಯರೆಲ್ಲರಿಂದು
ತಕ್ಕ ಯಶವನು ಪಡೆದುಕೊಂಡಿರೆ,
ಬಿಕ್ಕಬಿಕ್ಕಿ ಅಳುತ ನೀನು
ಏಕೆ ಸುಮ್ಮನೆ ಕುಳಿತಿಹೆ ?—

'ಪರರ ಭಾಷೆಗೆ ಮನವ ಹರಿಸಿ,
ಸಿರಿಯನೆಲ್ಲವನದಕೆ ಸವೆಸಿ
ಇರುವ ಮಕ್ಕಳು ನೀವು' ಎಂದು
ಕೊರಗಿ ಸುಮ್ಮನೆ ಇರುವೆಯಾ ?—

ಭಳ್ಳಾರಿಯು - ಬೆಳಗು

ಅಮ್ಮ ಇನ್ನು ಮುನಿಯಬೇಡ
ಎಮ್ಮ ಮೇಲೆ ಕೋಪ ಬೇಡ
ನಿಮ್ಮ ಸೇವೆಯನಿನ್ನು ನಾವು
ಒಮ್ಮನದಿ ಕೈಕೊಳ್ಳೆವು !—

# ಜೀವನದ ಹಾದಿ

ಜಗದುದ್ದ ಜಗದಗಲ
ಜೀವನದ ಹಾದಿ!
ನಡಿತೈತೆ ನಡಿತೈತೆ
ಜೀವಿಗಳ ನಾದಿ!!

ಬಾಳುವೆಯು ಬಲು ಆಳ
ಕೈಬಿಡದ ಗಾಳ!
ಸರಿಪಡಿಸೆ ಇರಬೇಕು
ಸರಿಯಾದ ವ್ಯಾಳ!!—

# ಬಾ ಸುಂದರಿ ಬಾ ಬೆಳಗಿಸೆ ಭಾವ!

ಬಾರೆಲೆ ಹೆಣ್ಣೆ
ಕವಿ ನಿಜಕಣ್ಣೆ
ಬಾ ಸುಂದರಿ ಬಾ
ಬೆಳಗಿಸೆ ಭಾವ!—

ಸುಂದರ ಹೃದಯದ
ಮಂದಿರದಲ್ಲಿ
ಪಂಕಜದೊಲು ಬಲು
ಮೃದು ಇಹುದಿಲ್ಲಿ!
ಎನ್ನಯ ಬಂಧುರ
ಎಡತಳದಲ್ಲಿ
ಮಂಡಿಸು ಮುದದಲಿ
ನೀನೇ ಇಲ್ಲಿ!

ನಿನ್ನಯ ಪ್ರೇಮವು
ಎನ್ನೊಳಗಿಲ್ಲೆ!
ನಿನ್ನಗೆ ಸರಿಬಹ
ಕವಿ ನಾನಲ್ಲೆ!
ಸುಂದರ ತೊಡಿಗೆಯ
ಕೊಡುವೆನು ನಲ್ಲೆ
ಕನ್ನಡ ಕತ್ತುರಿ
ಪೂಸಲು ಬಲ್ಲೆ!!—

ಬಳ್ಳಾರಿಯ - ಬೆಳಗು

ಕವನದ ಒಡತಿಯು
ನೀನೆನಗಾಗೆ
ಸುಂದರ ಒಡವೆಯು
ನವರಸವಾಗೆ
ಛಂದಸ್ಸೆಂಬುವ
ವಸನದಿ ನಿನಗೆ
ವಿಥವಿಧ ಉಡುಪನು
ಹೊಲಿಸುವೆ ಬಳಿಗೆ,

ಬಾ ಸುಂದರಿ ಬಾ
ಬೆಳಗಿಸೆ ಭಾವ!!—

# ಅಚ್ಚರಿಯದೇತಕ್ಕೆ ?

"ಮದುವೆಯಾಗದ ಹುಡುಗ
ಪ್ರೇಮಗೀತೆಯ ಹಾಡಿ,
ನಲಿಯುವುದೆ ಅಚ್ಚರಿಯು! ನಿಜವಲ್ಲವೆ?"
ಜೀವಭಾವದ ಗೆಳತಿ
ಮನದ ಮನೆಯೊಳು ನೆಲಸಿ,
ಹಾಡುಗಳ ಹೆಣೆಯುವಳು ಗೊತ್ತಿಲ್ಲವೆ?

ಜನಕೆ ಒಲು ಅನುಮಾನ
ಕೆಣಕಿದರೆ ದುಮ್ಮಾನ
ಇಣಿಕಿ ಹಾಕುವ ಛಾಳಿ ಬಿಡಲಿಲ್ಲವೆ!
ತನ್ನಿರವ ತಾ ಮರೆತು
ಭಾವನೆಯ ಬಾನಿನಲಿ
ತೇಲಿಬರೆ ಸಗ್ಗವದು ಕೈಲಲ್ಲವೆ!?

# ಯಾವ್ ಜೇನ್ ಸಮ ನಿನ್ನಧರಕ್ಕೆ!

ಮಲ್ಲಿಗೆಮಂಟಪದಡಿಯಲಿ ಅವಿತಿಹೆ,
ಹುಡುಕೆನೆ ನೀ ಹೇಳಿಂದುಮುಖಿ?
ನನ್ನಯ ತೋಳ್ತೆಕ್ಕೆಯು ಬಿಮ್ ಬಿಗಿದರೆ
ನಿನ್ನಯ ಮೈ ಜೇನ್ ನಾನೆ ಸುಖಿ!

ಮೈಮಲುಕುತ ನೀ ಹೊರಟಿಹೆ ಎಲ್ಲಿಗೆ
ಕೈಬಿಡುವೆನೆ ಹೇಳೆಲೆ ತರುಣಿ!
ಅಹ! ಬೆಡಗೇಽ ನಿನ್ನ ಸಿರಿನಡಗೇಽ!
ಎಳೆಗರುಕೆಯ ಮೇಲ್ ವನಹರಿಣಿ!

ಆಹ! ಕಮಲೇಽ ನೀ ಬಲು ಚಪಲೆಽ!
ಕುಣಿಯವಿ ಕಣ್ಣಲೆ ಏತಕ್ಕೆ!
ಮಲ್ಲಿಗೆ, ಜಾಜಿ ಕಮಲಿನಿ ಎಲ್ಲ
ಜೇನ್ತೊಟ್ಟೆಯು ಈ ಭೃಂಗಕ್ಕೆ!

ಅಹ! ಸಿಕ್ಕೆಯ ನೀನಿಲ್ಲಿದೆ ಇದೊ ಕೊಳ್
ಮೈಮುರಿಯುವಿ ನೀ ಬಿಂಕಕ್ಕೆ!
ತಪ್ಪಿಸಿಕೊಂಬೆಯ ಈ ತೋಳ್ತೆಕ್ಕೆ
ಯಾವ್ ಜೇನ್ ಸಮ ನಿನ್ನಧರಕ್ಕೆ!!




"ವೈ ಮಲುಕುತ ನೀ ಹೊರಟಿಹೆ ಎಲ್ಲಿಗೆ
ಕೈ ಬಿಡುವೆನೆ ಹೇಳೆಲೆ ತರುಣಿ!"

# ಬೇಕು

ಒಳಗೆ ಕಾಲಿಟ್ಟೊಡನೆ
ಬಳಿಗೆ ಬಂದೆನ್ನೊಡನೆ
ಮೆಲುಮೆಲನೆ ನುಡಿವಾಕೆ
ಮಡದಿ ಬೇಕು.—

ಕುರ್ಚಿಯಲಿ ಕುಳಿತಾಗ
ಅರ್ಥಿಯಲಿ ಬಂದೆನ್ನ
ಕುರುಳಿನಲಿ ಬೆರಳಾಡಿ
ನಲಿಯಬೇಕು.—

ಜರೆಯ ಕುಪ್ಪುಸ ತೊಟ್ಟು
ಹಸುರು ಸೀರೆಯನುಟ್ಟು
ನಸುಸೀಲಿ ಬಳೆಗಳನು
ಬೇಡಬೇಕು.—

ನೋಟಗಳು ನಟ್ಟಾಗ
ತುಟಿಗಳಲಿ ನಗೆ ಮೂಡಿ,
ನಸು ನಾಚಿ ತಲೆಬಾಗಿ
ನಿಲ್ಲಬೇಕು.—

'ಕಮಲಿನಿಯು ನೀನಿರಲು
ಇನಬಿಂಬ ನಾನೆ'ನಲು
ಸೆರಗಿನಲಿ ನಗೆ ಚೆಲ್ಲಿ
ನಿಲ್ಲಬೇಕು.—

ಊಟದಲಿ ಕುಳಿತಾಗ
ಬೇಟದಲಿ ಬೆರೆತಾಗ
ಸಾಕು ಸಾಕೆನುವನಕ
ನೀಡಬೇಕು!—

ಕವನಗಳ ಬರೆದಿಡಲು
ಕಳಕಂಠದಲಿ ಹಾಡಿ
ಕಿಲಕಿಲನೆ ನಗುನಗುತ
ನಗಿಸಬೇಕು.—

ಮುಗುವನಾಡಿಸುತಿರಲು
'ಮೊಗವಾರ ತೆರ'ನೆನಲು
ನಗೆಯಾಡಿ 'ಸಾಕು ಬಿಡಿ'
ಎನ್ನಬೇಕು.—

ತನ್ನ ಮನೆ ತವರುಮನೆ
ಉನ್ನತಿಯ ಬಯಸುವಳು
ಚೆನ್ನ ಚೆಲುವಿನ ಮಡದಿ
ಇರಲು ಸಾಕು.—

# ಬಾ ಲಲಿತೆ!

ಬಾ ವನಿತೆ ಬಾ ಲಲಿತೆ
ಕಮಲಿನಿಯ ಕೋಮಲತೆ
ಬರುವಿಂಗೆ ಬರವೇಕೆ
ಬಾ ನಲ್ಲೆ ಬಾ.—

ಥಳಥಳಿಪ ತಿಳಿಹೊಳೆಯ
ಮರಳದಿಣ್ಣೆಯ ಮೇಲೆ
ಹೊರಳುತ್ತ ಮೈಮರೆದು
ಆಡೋಣ ಬಾ.—

ಹರಳಿಟ್ಟ ಆಗಸದಿ
ಚಂದ್ರ ಬಂದಿಹನೆಂದು
ಕಾಮಣ್ಣ ಕೂಗ್ಯಾನೆ
ನೀನೋಡಿ ಬಾ.—

ಕುಣಿಕುಣಿದು ಮಣಿಮಣಿದು
ಹಾಡುತ್ತ ಹರಸುತ್ತ
ಚೆಲ್ಲಾಡಿ ಗುಲ್ಲಾಡಿ
ನಗುನಗುತ ಬಾ.—

ಫಣಿವೇಣಿ ಪಿಕವಾಣಿ
ಹಾಡಿನಲಿ ಬಲು ಜಾಣೆ
ಮೂಗುತಿಯು ಕುಣಿಸುತ್ತ
ಮುಂದೋಡಿ ಬಾ.—

ನೀರಿಗೆಯು ಚೆಲ್ಲುತ್ತ
ತೋಳುಗಳ ತೂಗುತ್ತ
ಕಣ್ಣ ಚಿಟಕಿಯು ಹಾಕಿ
ಕುಲುಕುತ್ತ ಬಾ.—

ಹಿಂದೊಮ್ಮೆ ಮುಂದೊಮ್ಮೆ
ಹಾಂಗೊಮ್ಮೆ ಹೀಂಗೊಮ್ಮೆ
ಜಡೆಕುಚ್ಚು ಚಾಚುತ್ತ
ಓಡೋಡಿ ಬಾ.—

ಭ್ರಮರಗಳು ಭ್ರಮಿಸುತ್ತ
ಮುಖದೆಡೆಗೆ ಹಾರ್‍ಯಾವು
ತೊರೆಯಾಗಿ ಮರೆಯಾಗಿ
ಹಾರುತ್ತ ಬಾ.—

ಕಾಲ್‌ಪಿಲ್ಲಿ ಚಲಪಿಲ್ಲಿ
ಕೈಬಳೆಯು ದನಿಯಲ್ಲಿ
ಕುಂಕುಮದ ಹಣೆಬಟ್ಟು
ನಡುವಿಟ್ಟು ಬಾ.—

ಮಲ್ಲಿಗೆಯ ಮುಡಿಯುತ್ತ
ಲಲ್ಲೆಯಲಿ ಹಾಡುತ್ತ
ಇಂಪಾಗಿ, ಸೊಂಪಾಗಿ
ಕಂಪಾಗಿ ಬಾ.—

ಮಾಮರವು ನಾನಾಗಿ
ಮಲ್ಲಿಗೆಯು ನೀನಾಗಿ
ಮೈಮರೆದು ಸುಧೆಯನ್ನು
ಸುರಿಯೋಣ ಬಾ—
ಸಗ್ಗಕೇರೋಣ ಬಾ.—

# ಅವನೇ ಗಂಡ

“ನಿನ್ನ ತಂದೆ ಬಹಳ ಫುಂಡ
ನಿನ್ನ ಬಯಕೆ ನಾನೆ ಗಂಡ
ಎಲ್ಲ ಕನಸು, ವ್ಯರ್ಥ, ದಂಡ
ಏಕೆ ಬಳಲುವೆ?”

“ಪುಂಡನಾದರೇನು ತಂದೆ
ಗಂಡನಲ್ಲವೇನು ಮುಂದೆ
ತುಂಡು ಬಟ್ಟೆ ಅನ್ನ ಕೊಟ್ಟು
ಕಾಯುವಾತನು?

ಗಂಡನಹುದು ಪ್ರೇಮಮೂರ್ತಿ
ನಲ್ಲೆಗುಂಟು ಅವನ ಕೀರ್ತಿ
ಇಬ್ಬರೊಲುಮೆ ಎಲ್ಲ ಪೂರ್ತಿ—
ಗೊಳಿಸಿ ಕಾವುದು.”

“ಅಹುದು ನಲ್ಲೆ ನಾನು ಬಲ್ಲೆ
ಇಬ್ಬರೊಲುಮೆ ದಿವ್ಯಮೂರ್ತಿ
ಆದರೇನು ತಾಯಿ ತಂದೆ
ಮೆಚ್ಚಬೇಡವೆ?

ನಿಮ್ಮ ಅತ್ತೆ ಮಗನಿಗೆಂದು
ನಿನ್ನ ಹೆಸರು ಮುಡಿಪದಂತೆ
ನನ್ನನೇಕೆ ಒಲಿದು ಬರುವೆ
ಚಿನ್ನ ಚೆಲುವೆಯೆ?"

"ಅತ್ತೆ ಮಗನು ಗಂಡನಲ್ಲ
ಮತ್ತೆ ಯಾರು ಗಂಡರಿಲ್ಲ
ಇತ್ತ ನಿಮ್ಮನೊಲಿದು ಬಂದೆ
ಕೈಯ ಹಿಡಿಯಿರಿ!"

"ಹಿರಿಯ ಕಿರಿಯರೆಲ್ಲ ಬೇಕು,
ಕರಿಯ ಮಣಿಯ ತಾಳಿ ಬೇಕು,
ಕಾರ್ಯ ಮಾಡೆ ಶಾಸ್ತ್ರ ಬಳಗ
ಬೇಡವೆಂದೆಯಾ?"

"ಶಾಸ್ತ್ರ ಬೇಡ ಬಳಗ ಬೇಡ
ಎದೆಗಳೆರಡ ಬೆಸಗೆ ಹೊಯ್ದು
ಪ್ರೇಮದಲರುಗಳನು ಕೋದು
ಕೊರಳ ತೊಡಿಸುವ!

ಸೂರ್ಯ ಚಂದ್ರ ತಾರೆ ಬಳಗ
ಪಕ್ಕಿವಿಂಡು ಭ್ರುಂಗಕೋಟಿ
ಸಾಕು ಸಾಕ್ಷಿ ಬೇಕದೇನು
ನಲ್ಲ ನೀನಿರೆ?"

# ನಸುಮುನಿಸು

ಸುಳ್ಳಿನ ರಾಶಿಯ ಸೂರರು ನೀವು
ಡಂಬಾ ಕೊಚ್‌ತೀರ
ಒಲ್ಲೇನಂದ್ರೆ ಬಾರೆ ಇಲ್ಲಿ
ಅಂದೇ ಅಂತೀರ—

ಪೇಟೇಲೋಗಿ ನೀಟಾದೊಂದು
ಸೀರಿ ತರ್‌ತೀನಿ
ಅಂದೇ ಅಂದು ಬಾಯಲಿ, ಬಣ್ಣ
ಸವರೇ ಬಿಡ್‌ತೀರ—

ಮೈಸೂರ್ ಮಲ್ಗೆ ಪ್ರೇಮಕಾಶ್ಮೀರ್
ತಂದೇ ತರ್‌ತೀರ
ತಂದ್ರಾ ಅಂದ್ರೆ ಮರ್‌ತೋಯ್ತಂತ
ಹಾರ್‌ಸೇ ಬಿಡ್‌ತೀರಾ—

ಜಾತಿ ಮುತ್ತು ತಂದೀನ್ ಬಾರೆ
ಅಂತ ಕರೆಯೋದು
ಖಾತ್ರಿ ಅಂತ ಕಯ್ಯ ಕೊಟ್ರೆ
ಕಚ್ಚೇಬಿಡೋದು.—

ಗೆಜ್ಜೆಪಟ್ಟೆ ಕೊರಳಕಂಠಿ
ಹರಳಿನುಂಗುರ

ಹೆರಳ ಕೊನೆಗೆ, ತರಳೆ, ಕುಚ್ಚು
ತಂದೀನಂತೀರ;—

"ಪಟ್ಟೆ ಇಟ್ಕೊವಂತೆ ಕಂರಿ
ನಾನೆ ಕಟ್ತೀನಿ
ಅಂತ ಕುತ್‌ಗಿ ತುಂಬ ಚಕ್ಕರ್-
ಗುಳ್ಳಿ ಇಡ್ತೀರ.—

ಉಂಗ್ರ ಇಡ್ತೀರಂತ ಬೆರಳ
ಮುಂದೆ ಮಾಡಿದ್ರೆ
ಹಿಚುಕಿ ಇಪ್ಪಿ ಮಾಡ್‌ಬಿಡ್ತೀರ
ಒಲ್ಲೆ ಮಾರಾಯ್ರು!—

'ನಿನ್ನ ಮೈಗೆ ತುಂಬು ವಡವೆ
ನಾನೆ' ಅಂತೀರ,
ತವರಿಗೋಗ್ತೀನಂದ್ರೆ ಊಟ
ತೊರದೇ ಬಿಡ್ತೀರ.—

ಸುಳ್ಳಿನ ರಾಶಿಯು ಸೂರರು ನೀವು
ಡಂಬಾ ಕೊಚ್ತೀರ
ಒಲ್ಲೇನಂದ್ರೆ ಬಾರೆ ಇಲ್ಲಿ
ಅಂದೇ ಅಂತೀರ.—

# ಸೇರುವೆ ತೀರ

ಮುಂಜಾವಿನ ಮುಗಿಲಂದದಿ ಬೆಳಗುವ
ನಿನ್ನವು ಕೆನ್ನೆಗಳೆಲೆ ನೀರೆ!
ಸಂಜೆಯ ಜಾವಿಗೆ ಮಿರಿಮಿರಿ ಮಿರುಗುವ
ಕಂಗಳು ನಿನ್ನವು ನಿಜತಾರೆ!

ಹುಣ್ಣಿಮೆ ಚಂದ್ರನು ಕುಂಕುಮಬಟ್ಟು
ಕಂಗಳಿಗಾನಂದದ ಗುಟ್ಟು
ಒಲೆದಾಡುತಲಿಹ ಉಂಗುರುಗುರುಳು
ಮುಖಕಮಲಕೆ ಭ್ರುಂಗಾಳಿಗಳು.

ತಾವರೆದಳಗಳ ತುಟಿಗಳ ನಲುಗಿಸೆ
ನೆರೆವುವು ಮಲ್ಲಿಗೆ ಮಾಲೆಗಳು!
ತಳಪಳ ಹೊಳೆಯುವ ಮೂಗುತಿ ಬಟ್ಟೊಳು
ಕಾಂಬುದು ಎನಗದು ಧ್ರುವತಾರೆ!

ಕೋಗಿಲೆ ಕಂಠದಿ ಮನೆ ಮಾಡಿರುವುದು
ಅಂಚೆಗಳಿವೆ ಮೆಲ್ಲಡಿಗಳಲಿ!
ನಿನ್ನಯ ನಳಿದೋಳುಗಳೇ ಎನ್ನಯ
ಕೊರಳಿಗೆ ಸುತ್ತುವ ಮಾಲೆಗಳು

ಕುಡಿನೋಟವೆ ಕುಣಿದಾಡುವ ನವಿಲು
ನಗೆಯಾಟವೆ ಹಾಲಿನ ಹೊಳೆಯು,
ಹಾಲಿನ ಹೊಳೆಯೊಳು ಈಸುತ ನೀರಾ
ಸೇರುವೆನೆಲೆ ನಾನಾಚೆಯ ತೀರ!!

# ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ

ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

ಸಿರಿವಂತೆಯೋ—ಮತ್ತೆ
ಬಡ ಹುಡುಗಿಯೊ,
ಕೆಂಪಿರುವೆಯೋ—ಮತ್ತೆ
ಕಪ್ಪಿರಿವೆಯೋ,
ಕಳಕಂಠವೋ—ಮತ್ತೆ
ಗೊರವಂಕವೋ,
ಮೃದುಮಧುರೆಯೋ—ಮತ್ತೆ
ಪೆಡಸಿರುವೆಯೋ.
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

ಸಿಡಿಗುಡುವೆಯೋ,—ಮತ್ತೆ
ನಗೆಚೆಲ್ವೆಯೋ,
ರಸಭಾವೆಯೋ—ಮತ್ತೆ
ಸಿಡಿಬುದ್ಧಿಯೋ,.
ಕವಿಜೋಡಿಯೋ—ಮತ್ತೆ
ಅತಿಮೂಢೆಯೋ,

ಮೆಲು ನುಡಿವೆಯೋ—ಮತ್ತೆ
ಒಣಜಂಭವೋ;
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

ನನ್ನ ನೀ ನೋಡಿಲ್ಲ.
ಹಾಡುಗಳ ಹಾಡು;
ಹಾಡಿ ಹಿಡಿ ಆಮೇಲೆ
ಈ ಕಡೆಯ ಜಾಡು!
ನಾನು ನಂಬಿಹೆ ನಲ್ಲೆ
ಮೃದುಮಧುರೆಯೆಂದು,
ಕಳಕಂಠೆ, ಕಡುಚೆಲುವೆ
ಕಮಲಾಕ್ಷಿಯೆಂದು.
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

ಈ ಕವಿಯು ಬಲು ಕಾಮಿ
ನೀನದನು ಬಲ್ಲೆ!
ಕವನದಲಿ ಕಂಡಿರುವೆ
ನಾನದನು ಬಲ್ಲೆ!
ನನ್ನ ಹಾಡಿನ ಕೋಡಿ
ನಿನ್ನ ಕೊರಳಿಂದೆ
ಹೊರ ಹೊಮ್ಮಿ ಜಗವೆಲ್ಲ
ತುಂಬಿಕೊಳಲಿಂದೆ!
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

## ಬಳ್ಳಾರಿಯು - ಬೆಳಗು

ಬಳಲಿ ಬೆಂಡಾಗುವೆನು
'ಏತಕೆ'ನೆ ಅರಿಯೆ!!
ಅಲ್ಲಲ್ಲಿ ಆಗಾಗ
ಬಿಸಿಯುಸಿರ ಬಿಡುವೆ.
ನಿನ್ನ ಮೃದುಹಸ್ತಗಳ
ಸ್ಪರ್ಶನವು ಬೇಕು!
ಲಲ್ಲೆಯುಲಿ ಮೆಲ್ಲುಲಿವ
ನಲ್ಲೆ ನೀ ಬೇಕು!
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

ಬಡತನವೊ ಸಿರಿತನವೊ
ಏನೆ ಇರಲೆಮಗೆ,
ಅರಮನೆಯೊ, ಗರಿಮನೆಯೊ
ಇರಲದುವೆ ನಮಗೆ;
ಪಕ್ಕದಲಿ ಪವಡಿಸಲು
ಮರ್ತ್ಯವನೆ ಮರೆವೆ
ಚೆಂದುಟಿಗೆ ತುಟಿಯೊತ್ತಿ,
ಸಗ್ಗವನೆ ತರುವೆ!!
ಎಲ್ಲಿರುವೆ ಎಂತಿರುವೆ ನಾನೇನ ಬಲ್ಲೆ,
ಬಂದು ಬಾಳಿಗೆ ಬೆಳಕನೀಯೆನ್ನ ನಲ್ಲೆ!

# ಹೀಗಾಯಿತೆ!!

ನೀ ಬಿಟ್ಟಹ ಜಡೆ
ಕಾಳಿಂಗನ ಹೆಡೆ
ಕೊರಳನು ಕೊಂಕುತಿರೆ
ಹಾಕಲು ಹೆಜ್ಜೆ
ಝುಣಿರೆನೆ ಗೆಜ್ಜೆ
ಚಲಿಸದೆ ಕಣ್ಣ ತೆರೆ!

ನಿನ್ನಯ ದಿಟ್ಟೆ
ಕೊರಳಿಗೆ ಕಟ್ಟೆ
ಎಳೆದೊಯ್ಯುವ ಕಣ್ಣೆ!
ನಿನ್ನಯ ಮೈಯಿ
ಮುಟ್ಟಲು ಕೈಯಿ
ಕಾಳೆಮ್ಮೆಯ ಬೆಣ್ಣೆ!!

ಕುಪ್ಪುಸ ಬಿರಿಯೆ
ಮುಸುಗಿನ ತೆರೆಯೆ!
ಮೈಮುರಿದೊಡೆಯುತಿರೆ!
ಏತಕೆ ಬಿಂಕ
ಹಿಡಿಸುವಿಯಂಕ
ರತಿರಾಗವ ಕರೆಯೆ!

## ಬಳ್ಳಾರಿಯ - ಬೆಳಗು

ನೋಡುತನಿಂದೆ
'ಯಾಕಡೆಗೆಂದೆ'
ನೀ ಕುಡಿನೋಟ ಬಿಡೆ!
ಬಳುಕುತ ನಡೆದೆ
ಥಳಕನೆ ಹೊಳೆದೆ
ಮೈ 'ಝುಮ್ಮ'ನ್ನುತಿರೆ!!

ಮೆಲುನಗೆ ಉಕ್ಕೆ
ಕುಲುಕುಲು ನಕ್ಕೆ
ಅದೆ ಆಯಿತು ರೆಕ್ಕೆ!
ಹಾಡುತ ಬಂದೆ
ಪಕ್ಕದಿ ನಿಂದೆ
ಎರಡಕ್ಷಿಯ ಚುಕ್ಕೆ!!

ನಿನ್ನಯ ಕೆನ್ನೆ
ಎರಡಕು ನಿನ್ನೆ
ಜೇನ್ ತುಂಬಿಟ್ಟರೆನೆ!
ಚೆಂದುಟಿ ಬಿರಿಯೆ
ಜೇನ್ ಸಲೆ ಸುರಿಯೆ
ಚುಂಬಿಸಿ ಚೀಪಿದೆನೆ!!

# ತಿಳಿಬ್ಯಾಡ ಬೇರೆ ಏನನ್ನ!

ನೀ ಬಹಳ ಸೋಜಿಗದ ಹೆಣ್ಣು। ಪಿಳಿ ಪಿಳಿ ಕಣ್ಣು।
    ಬಿಡಿತಿಯಾಕ। ಮಂಕ ಹಿಡಿಸಲಾಕ!
ಅದು ಯಾವ ಸೀಮಿಯ ಭಂಗಿ। ನೀ ಯಾರ ತಂಗಿ।
    ನೋಡ್ತಿಯಾಕ ಹಾಂಗ। ರೆಪ್ಪೆ ಬಡೀದ್ಹಾಂಗ।
ಏನೊ ಅಂತಿ ನೀ ಮನಸಿನಾಗ। ತಿಳಿಯೊ ಬಗೆ ಹ್ಯಾಂಗ।
    ಹಿಡಿತೇನ ಹುಚ್ಚು। ಯಾಕೆ ಈ ಪೆಚ್ಚು।
ನೀ ನೋಡಬ್ಯಾಡ ಹಾಂಗ। ನನಗೆ ಹ್ಯಾಂಗ್ ಹ್ಯಾಂಗ।
    ಆಗ್ತಾದ ಈಗ। ಹುಚ್ಚು ಮನಸಿನಾಗ।
ಈ ಸಭೆಗೆ ನೀನ್ಯಾಕ। ಬಂದಿ, ನೆವನಾಕ।
    ನಾ ಅದನ ಬಲ್ಲೆ। ಬೇರೆ, ಮನಸಿನಲ್ಲೆ।
ನೀ ಬೆಂಗಳೂರ ಹೆಣ್ಣು। ಸಿಹಿ ನಿಂಬೆಹಣ್ಣು।
    ನೀ ಯಾರ ಕುವರಿ। ಮೈ ತಣೀತು ಬೆವರಿ।
ತಿಂತಿಯೇನ ನೀ ತುಟಿ ಕಚ್ಚಿ। ಮನದ ಮುಂಡಿಗೆ ಬಿಚ್ಚಿ।
    ಎಸಿ, ಈ ಇತ್ತ। ಒಂದು ಮಾತಿನ ಮುತ್ತ।
ನೀ ನಗ್ತಿ ಬಹಳ ಕಮ್ಮಿ। ಯಾವಾಗೊ ಒಮ್ಮಿ।
    ಮಿಂಚು ಹೊಳೆದ್ಹಾಂಗ। ಅದು ಯಾಕ ಹೀಂಗ।
ನೀ ಉಟ್ಟ ಬಿಳಿಸೀರಿ। ಎಲ್ಲ ಬಣ್ಣಕ್ಕು ಮೀರಿ।
    ಕಾಣ್ತಾದ ಅಂದ। ನೀ ಬಹಳ ಚಂದ।

ಹರಳಿನ ನತ್ತು ಗಿಳಿಮೂಗಿನಾಗ| ಮತ್ತ ಕಿವಿಯಾಗ|
ಬೆಂಡೋಲೆ ಬೆಳಕು| ಒಳ್ಳೆ ಥಳಥಳಕು|
ಜಡೆಗೆಲ್ಲ ಒಂದೆ ಹೂವು| ಚೆಂಗುಲಾಬಿ ಹೂವು|
ನಗ್ತಾದೆ ಹ್ಯಾಂಗ| ಚೈತ್ರ ಬಂದ್ಹಾಂಗ|
ನಾ ಸುಮ್ಮನೆ ಅಂದೆ ಈ ಮಾತು| ಸತ್ಯರೂಪಕ್ಕೆ ಸೋತು|
ತಿಳಿಬ್ಯಾಡ ಬೇರೆ ಏನನ್ನ| ನಾ ರಸಿಕ ರನ್ನ|
ಈ ನನ್ನ ಕಳ್ಳಹಾಡ| ನೀ ಮತ್ತೆ ಹಾಡಬ್ಯಾಡ|
ಬೇರೆಯಾದೀತು ಬುದ್ಧಿ| ಯಾಕೆ ಆ ಸುದ್ದಿ|

# ಕೊಲ್ಲುವಿರೋ ಮಗಳ

ಕೊಲ್ಲುವಿರೋ
ನೀವ್
ಕೊಲ್ಲುವಿರೋ
ಮಗಳ !—

ಬಚ್ಚಲು ಬಾಯಿ
ಸುಕ್ಕಲು ಮುಖದ
ನಾಳೆಯೊ ನಾಡಿದೊ
ನೆಲವನು ಹಿಡಿವ
ಮುದುಕಗೆ
ಕೊಡುವಿರೋ
ನೀವ್
ಕೊಲ್ಲುವಿರೋ
ಮಗಳ !

ಕಮಲದ ದೇಂಟು
ಅವಳದು ಮೈಯಿ !
ಮುಂಜಾವಿನ ತಾ-
ವರೆ ಮುಖವಯ್ಯ !
ಕೆನ್ನೆಗಳೆರಡು
ಕಿತ್ತಳೆಹಣ್ಣು !
ಕೊಲ್ಲುವಿರೋ........—

ಮೊನ್ನೆ ಮೊನ್ನೆ
ಹಾಲಿನ ಗಲ್ಲ!
ಹನ್ನೆರಡಿನ್ನು
ತುಂಬಲಿಲ್ಲ!
ಹರೆಯದ ಹೊಗರು
ಮೈದೊಡಲಿಲ್ಲ
ಕೊಲ್ಲುವಿರೋ........—

ಮುದುಕಗೆ ಈಗ
ಅರವತ್ತೈದು!!
ಕಟ್ಟುವಿರಲ್ಲೋ
ಕನ್ನೆಯು ಬೈದು!
ಮಾಡುವರಿಲ್ಲೆ
ನಿಮ್ಮನು ಕೈದು!?
ಕೊಲ್ಲುವಿರೋ........—

ಹುಡುಗ ಹುಡುಗಿ
ಕೈ ಕೈ ಕುಲುಕಿ,
ಕುಣಿಯಲಿ ಜಗದಿ
ಮೈ ಮೈ ಮುಲುಕಿ;
ಸಾಗಲಿ ಸುಖದಿ
ಜೀವನ ನೌಕಿ.
ಕೊಲ್ಲುವಿರೋ........—

ರೊಕ್ಕದ ಪ್ರೇತ
ಹೊಕ್ಕಿದೆ ಮನವ!

ಇಕ್ಕುತ ಮುಗಳ
ಜೀವಕೆ ಗೋಳ,
ಒರೆಯುವಿರಲ್ಲೋ
ಜಗದೊಳು ಬಾಳ!
　　ಕೊಲ್ಲುವಿರೋ........—

ಸಂಜೆಯ ಹೆಣ್ಣು
ನಲ್ಲನ ಕಂಡು
ಹರುಷದ ಹೊಳೆಯು
ಹರಿಸಲಿ ಮನದಿ;
ಗಲ್ಲಕೆ ಗಲ್ಲ
ಕೀಡಲಿ ಭರದಿ
　　ಕೊಲ್ಲುವಿರೋ........—

ಸಂಜೆಯ ಸೂರ್ಯನ
ಶಪಿಸದೆ ಇರಲಿ!
ಬೆಳಗುವ ಚಂದ್ರನ
ಅಳಿಯದೆ ಇರಲಿ!
ತೊಳಗುವ ತಾರೆಗೆ
ಕೊರಗದೆ ಇರಲಿ!
　　ಕೊಲ್ಲುವಿರೋ........—

ಮಲ್ಲಿಗೆ ಹೆಣೆದ
ನಿಡುಜಡೆ ಬಿಟ್ಟು
ನಲ್ಲನ ಬರುವ
ಕಣ್ಣಲಿ ನೆಟ್ಟು,

ಗಲ್ಲವ ಬಾಗಿಲ-
ತೋಳಿಗೆ ಕೊಟ್ಟು,
ಕೆಳದುಟಿ ಹಲ್ಲಿನ-
ಸಂದಿಗೆ ಕೊಟ್ಟು,
ನಿಲ್ಲಲಿ ಮೆಲ್ಲುತ
ಮುಂದಿನ ಸುಖವ!!
ಕೊಲ್ಲುವಿರೋ........—

# ಸುಂದರನ ಕಾಗದ

ಎಂದೂ ಇಲ್ಲದ
ಸಡಗರವಂದು
ರಾಯರ ಮನೆಗಳಲಿ;
ಬನ್ನಿರಿ, ಕುಳ್ಳಿರಿ
ಅರಿಸಿನ ತನ್ನಿರಿ
ಹಸೆಮಣೆಗಳು ಎಲ್ಲಿ—ಎನ್ನುವ
ದನಿಗಳೆ ಮನೆಯಲ್ಲಿ

"ಅಪ್ಪಟಿ ಮೂಗಿನ
ಬಿಬ್ಬಿರಿವಲ್ಲಿನ
ಸೊಟ್ಟನ ನಾವೊಲ್ಲೆ;
ಒಕ್ಕರ ಗಣ್ಣಿನ
ಕರಡಿಯ ತೊಗಲಿನ
ಗಂಡನ ನಾವೊಲ್ಲೆ"—ಎಂದಳು
ಕಮಲೆಯು ಧೈರ್ಯದಲೆ!

ತಂದೆಯ ಮುಖದಲಿ
ಬೆಂಕಿಯ ರಾಶಿ
ಬೈಗಳ ಜಡಿಮಳೆಯು,

ಕಮಲೆಯ ಕಣ್ಣಲಿ
ಕಂಬನಿ ಕೋಡಿ
ನಿಲ್ಲದೆ ಹರಿದಿತ್ತು!—ಹೃದಯದ
ಕಾತರ ಹೆಚ್ಚಿತ್ತು!

"ಸಾವಿರಗಟ್ಟಲೆ
ರೊಕ್ಕವದೇನು
ಪುಕ್ಕಟೆ ಸಿಕ್ಕುವುದೆ?
ಕರಿಯನು ನಿನ್ನಯ
ಗಂಡನು ಆದರೆ
ಬಾಳುವೆ ಸೊಗಸಲ್ಲೆ—ಎನ್ನಯ
ಮಾತಿಗೆ ಬೆಲೆ ಇಲ್ಲೆ"

ಸರೆ, ಊಟವ ತೀರಿಸಿ
ಕಾರ್ಯದಿ ತೊಡಗಲು
ನಡೆದರು ಒಳಗಡೆಗೆ,
ಕಮಲೆಯ ಕಂಬನಿ
ದಿಂಬನು ತೊಯ್ದಿತು
ನೆನೆದಳು ಮನದಲ್ಲೆ—'ಎನ್ನಗೆ
ಬಿಡುಗಡೆ ಇನ್ನಿಲ್ಲೆ!'

'ವೇಳೆಯು ಆಯಿತು
ಬನ್ನಿರಿ ಎಲ್ಲರು

ಕರೆಯಿರಿ ಮದುಮಗಳ'
ಹಿರಿಕಿರಿ ಹೆಂಗಳು
ನಡೆದರು ಕೋಣೆಗೆ
ಕಮಲೆಯು ಒಳಗಿಲ್ಲ!—ತಂದೆಯು
ಬಾಯೇ ಬಿಡಲಿಲ್ಲ!

ಹೊಕ್ಕರು ರಾತ್ರಿಯೆ
ಮನೆಗಳನೆಲ್ಲ
ಕಮಲೆಯು ಸಿಗಲಿಲ್ಲ!
ಹಸೆಮಣೆ ಏರಿದ
ಆ ಕರಿಗಂಡ
ಬೆಪ್ಪರಿ ಬೆರಗಾದ—ಸಪ್ಪಗೆ
ಅರಿವೆಯ ಸೊಪ್ಪಾದ!

ಮೂರನೆ ದಿನದಲಿ
ಬಂದಿತು ಕಾಗದ
ತಂದೆಯ ಹೆಸರಿನಲಿ:
"ಸುಂದರ ಮಾಡುವ
ಮಮತೆಯ ವಂದನೆ
ರಾಯರೆ ಇದೊ ಕೇಳಿ,—ಕಮಲೆಯು
ಇರುವಳು ಎನ್ನ ಬಳಿ!

ರೈಲಿಗೆ ಬಂದಳು
ಬಿಸಿಲಿನ ಉಸಿರಾಗಿ!
ಮುಗಿವುದು ನಾಳೆಗೆ
ನನ್ನಯ ಬಿ. ಎ.
ಬರುವೆವು ನಾವಾಗಿ—ಇದ್ದರೆ
ನಿಮ್ಮಗೆ ಬೇಕಾಗಿ!"—

## ಸಂಜೆಯ ಚೆಲುವೆ

ಸಂಜೆಯಲಿ ಬಿಂದಿಗೆಯ
ಟೊಂಕದೊಳಗಿಟ್ಟು,
ಬರಬರನೆ ಕೈಬೀಸಿ,
ನಡೆವ ಏ, ಹುಡುಗಿ!

ಅಬ್ಬ! ಕೊರಳಿನ ಕೊಂಕೆ
ಅದು ಏನೆ ಗುಟ್ಟು!
ಮರಿಯಾನೆ ಗತಿಯುವಳೆ
ನಿಲ್ಲೆ ಏ, ಬೆಡಗಿ!

ಕಪ್ಪುನಾಗರಹಾವ
ಒಪ್ಪು ಜಡೆಯುವಳೆ,
ಬೆಪ್ಪು ಹಿಡಿಸುವಿಯಲ್ಲೆ
ನಾನೆಂಥ ಮರುಳೆ!!

ಕಮಲಪುರಿಯೊಳಗೆಲ್ಲ
ನೀನೆ ಬಲು ಚೆಲುವೆ
ಮಲ್ಲಿಗೆಯ ರಾಶಿಯನು
ಜಡೆತುಂಬ ಹೆಣೆವೆ!

ಕೈಹಿಡಿದು ಕೇಳೇನು
ನಿಲ್ಲೆ ಏ, ಹುಡುಗಿ
ನನ್ನ ಕೈಹಿಡಿಯಿಂದು
ಕಾಮುನ್ಕ ಬೆಡಗಿ!

# ಆ ಹುಡುಗಿ

ನಮ್ಮೂರ ಸಿರಿವಂತ-
ರಾ ಹುಡುಗಿ ಪಾಪ!
ಬಲು ಚೆಲುವೆ ಗಂಭೀರೆ
ಎಲ್ಲಿಯದೊ ಶಾಪ!!

ಏಳನೆಯ ವರ್ಷದಲಿ
ಮಾಡಿದರು ಮದುವೆ
ಹೇಳಬಾರದು ಸಾಕು,
ಅವಳೀಗ ವಿಧವೆ!

ಮದುವೆ ಕೂಡದು ಮತ್ತೆ
ಮನೆತನಕೆ ಲತ್ತೆ!!
ಅಯ್ಯೊ ಶಾಸ್ತ್ರದ ಮಾರಿ
ಕೋಮಲೆಗೆ ಮಿತ್ತೆ!

ರಾಜಪುರಿ ರಘುನಂದ
ಬಲು ಸುಂದರಾಂಗ
ವರ್ಷಗಳು ಇಪ್ಪತ್ತು
ಇರಬಹುದು ಈಗ.

'ಒರಿಸುವೆನು ಹುಡುಗಿಯನು
ಒಪ್ಪಿದರೆ' ಎಂದು

ತಿಳಿಸಿದನು ಹಿರಿಯರಿಗೆ
'ಅರಳು ಮೊಗ್ಗೆ'ಂದು!

ಭ್ರಮರ ಸೋಂಕದ ಕುಸುಮ
ಒಪ್ಪಿದಳು ಅಂದು
ಅಯ್ಯೊ! ಹೇಳಿತು ಹಳೆಯ
ತಲೆಯು ಬೇಡೆಂದು!

ಜೀವನವ ಹುಡಿಗೈವ
ಕೊಳೆ ಧರ್ಮಕೀಗ
ಕೊಡಿ ಬೆಂಕಿ ಆಗಲದು
ಹಿಡಿಬೂದಿ ಬೇಗ!

# ಶಿವನ ಓಲಗವಾಯ್ತು

೧

ಹೊರಗೆ ನೋಡೇ ತಂಗಿ, ಅವರು ಬಂದಂಗಾಯ್ತು
ಕುದುರೆ ಗಾಡಿಯ ಸದ್ದು ಕೇಳುತಿಹುದು.
ಒಂದು ಗಂಟೆಯು ನನಗೆ ಯುಗವಾಗಿ ತೋರುವುದು
ಚಂದ್ರಬಿಂಬವು ಹಾಲ ಹರಿಸುತಿಹುದು!

ತೊಟ್ಟಿಲಿನ ಚಂದಿರನು ಹುಟ್ಟಿ ತಿಂಗಳು ಮೂರು
ಕಳೆದಾಯ್ತು ಅವರಿನ್ನು ಬಾರದಿಹರು
ಇಷ್ಟು ದಿನ ಬರೆದಾಯ್ತು ಅವಸರವದೇನೆಂದು
ನಿನ್ನೆ ಬಂದಿದೆ ಪತ್ರ 'ಬರುವೆನೆ'ಂದು.

೨

(ರಾಯರು ಬಂದಿದ್ದಾರೆ)

ಅವರು ಬಂದಾರೇನೆ, ಮರುಗ ತಂದಾರೇನೆ,
ಗರಿಯಕೇದಗೆ ಸಿವುಡುದವನವೇನೆ!
ಮಲ್ಲಿಗೆಯ ಹೂದಂಡೆ, ಚೆಂಗುಲಾಬಿಯ ಗೊಂಡೆ
ಇಂದು ಇವನೆಲ್ಲವನು ತಂದರೇನೆ!

ಚೆಂದಿರಗೆ ಚೆಲುವಂಗಿ ಚಿನ್ನದೆಳೆ ಉಡುದಾರ
ಕೊರಳ ಕಟ್ಟಾಣಿಯನು ತಂದರೇನೆ!
ಅಪ್ಪ ಅಮ್ಮರ ಕೂಡೆ ಮಾತನಾಡಿದ್ದಾಯ್ತು
ಇನ್ನು ಬರುವರು ತಡಿಯದಿಂಬುತಾರೆ.

೩

(ರಾಯರು ಕೋಣೆಗೆ ಬರುತ್ತಾರೆ)

ಬರಿಯ ಕೋಣೆಯು ಇಂದು ಶಿವನ ಓಲಗವಾಯ್ತು
ಚಂದಿರನ ಕಿರುನಗೆಯು ಚೆಂದವಾಯ್ತು!
ಯಾರೊ ಕರೆದಂಗಾಯ್ತು, ಹೊರಗೆ ನೋಡೇ ತಂಗಿ
ಬಾಗಿಲಿನ ಕಿವಿಹಿಂಡಿ ಹೊರಗೆ ಸಾರೆ!

೪

(ತಂಗಿ ಹೊರಗೆ ಬರುತ್ತಾಳೆ)

ಬಳ್ಳಾರಿ ಹೊಗೆಗಾಡಿ ಮೈಸೂರ ಕಡೆ ಸಾಗಿ
ಬರಲು ಮುಷ್ಕರ ಹಾಕಿ ಕಾಡಿತೇನ್ರಿ!
ತಿಥಿ ಬಂದ ಕಾಲಕ್ಕೆ ಸತಿ ಬಾಳ ಸವಿಯಂತೆ!
ಏಕೆ ನಗುವಿರಿ ಸಾಕು ಸುಮ್ಮನಿರ್ರಿ!

ಸಾಕುಬಿಡಿ ಮಹರಾಯ ನಿಮ್ಮ ಚೇಷ್ಟೆಯು ಇನ್ನು
ಬಾನ ಚಂದಿರ ಇಣಿಕಿ ಹಾಕುತಿಹನು!
ನೀವು ಬಲು ಸೊರಗಿಹಿರಿ, ನಾನು ನಿಲ್ಲೆನು ಇಲ್ಲೆ
ಇನ್ನು ಕಿರುಚಂದಿರನು ಸುಮ್ಮನಿರನು.

ಚಂದಿರನ ಕಂಡ ಜನ ಒಂದೆ ಮಾತಾಡುವರು
'ನಿಮ್ಮ ರಾಯರ ಪಡಿಯ ಅಚ್ಚು' ಎಂದು.
ನಿಮ್ಮ ಮುತ್ತಿನ ಮಳೆಯ ಮುಯ್ಯಿ ತೀರಿತೆ ಸ್ವಾಮಿ
ಚಂದಿರನ ರೂಪವನು ತಳೆದುಬಂದು!



"ನಿಮ್ಮ ಮುತ್ತಿನ ಮಳೆಯು ಮುಯ್ಯಿ ತೀರಿತೆ ಸ್ವಾಮಿ
ಚಂದಿರನ ರೂಪವನು ತಳೆದು ಬಂದು."

## ಇರಬಹುದು ರಾಗ!

ಪುಸ್ತಕಗಳಿದೆಗೊತ್ತಿ
    ನಡೆದಿಹಳು ಹುಡುಗಿ,
ಅಂಚಿಗಳಿಗೆಲ್ಲಿಹುದು
    ಅವಳ ಸಮ ನಡಗಿ!

ತಲೆ ಮೇಲೆ ನಿಲ್ಲದಿದೆ
    ರೇಶಿಮೆಯ ಮುಸುಗ
ನಗುತಲಿವೆ ಮಲ್ಲಿಗೆಯು,
    ದವನ ಮೇಣ್ ಮರುಗ

ಮುಂದೆ ಮುಂದೆಯೆ ನಡೆದ
    ಕಾಲೇಜು ಹುಡುಗ
ನೋಡಬೇಕೀಗವಳ
    ಕಿಡಿಗೇಡಿ ಬೆಡಗ!

ಛೆ! ಛೆ!! ಹೇಳಲುಬೇಕೆ
    ಅದನೆಲ್ಲ ಈಗ?
ಮಣಕಮಿಗ ಇರಬಹುದು
    ಕಣ್ಣೊಳಗೆ ರಾಗ!

# ನೀನಾದರೆ ನನ್ನಯ ಮಡದಿ:

ಏನೆಂದೇನೆಂದೇನೆಂದೆ?
ನೀನೆನ್ನಯ ಮಡದಿಯೆ ಮುಂದೆ!?
ನನ್ನಯ ಹಿಂದೆಯೆ ನೀನೈತಂದೆ!
ತಿಳಿಯದೆ ನಡೆದೆನು ನಾ ಮುಂದೆ!

ಎನ್ನೊಳಗೇನಿದೆ, ಹೇ, ತಳಿರೇಣಿ,
ನಲ್ಲನ ಆರಿಸೆ ನೀ ಬಲು ಜಾಣಿ!
ಬಡಹುಡುಗನು ನಾನರಿಯೆಯ? ವಾಣಿ
ನೀನಾಗುವೆಯಾ? ಕವಿತೆಯ ರಾಣಿ!!

ಬಡತನ, ಸಿರಿತನ ಸ್ಥಿರಮದು ಅಲ್ಲ!
ಹೇಳುತ್ತಿಹುದದೊ ನಿನ್ನಯ ಗಲ್ಲ!
ಏನೆಂದೆಯೊ, 'ನಾ ನಿನ್ನಯ ನಲ್ಲ!!'
ನನಗೊಪ್ಪಿಸಿದೆಯ ವೈಸಿರಿಯೆಲ್ಲ!?

ನನ್ನಯ ಹೃದಯವು ಬಲು ಮೆತ್ತನದು
ನಿನ್ನಗೆ ಸುಪ್ಪತ್ತಿಗೆಯಂತಿಹುದು!!
ನೀನದಕೊಡತಿಯು, ನಿನ್ನಯ ಬೀಡು!
ಸವಿಯುವಿಯಾದೊಡೆ ಸಿಹಿ ಜೇನ್‌ಗೂಡು!

ಸಂಜೆಯ ಜಾವಿಗೆ ಕೇದಗೆ ಮಲ್ಲಿಗೆ
ತಂದಿರಿಸುವೆ ನಿನ್ನಯ ಮುಡಿಗೆ
ಆಗಾಗುವಿ ಕಡುಕಂಪಿನ ಹಡಗೆ,
ತುಟಿ ತುಡುಕುತ್ತಿದೆ ಚೆಂದುಟಿಗೆ!!

ಸುಖದುಃಖಗಳವು ಸಮವೆಂದೆಣಿಸಿ,
ಕನ್ನಡ ಕವಿತೆಯ ಹೊನಲಂ ಹರಿಸಿ,
ಆನಂದಾಂಬುಧಿಯನು ನಾವ್ ನಿಲಿಸಿ,
ಈಜುವ ಬಾ ಬಾ ದಡವಂ ಅರಸಿ!!—

# ಮನ್ಮಥಗೆ ಒಂದಿನಿಸು ಭೇದವಿಲ್ಲ!

ಮನೆ ಮನೆಗೆ ತಿರಿದುಂಬ ತಿರುಕಿಯನು ನೋಡು
ಬಿಕ್ಕೆಯನು ಬೇಡುತಿಹಳದು ಎಂಥ ಪಾಡು!!
ಸೌಂದರ್ಯದಾಗರವು, ಸೊಬಗಿಂಗೆ ಬೀಡು!
ಆದರೇನಾಗಿಹುದು ಬಡತನದ ಜೋಡು!

ಇಂದ್ರಲೋಕದ ಸಿರಿಯು ಚೆನ್ನ ಚೆಲುವೆಯರೆಲ್ಲ
ತಿರಿದುಣಲು ಭೂಮಿಗೈತಂದರಲ್ಲ!
ಎಂಥ ಚೆಲುವೆಯು ಪಾಪ, ತಿರಿದುಣ್ಣಬೇಕಾಯ್ತೆ!
ಅವಳ ರೂಪಿಗೆ ವಾಣಿ ಸೋತಳಲ್ಲ!

ರಾಣಿರಾಣಿಯರೆಲ್ಲ ನಾಚಿಕೊಳಲಾಯ್ತಲ್ಲ
ಅವಳ ರೂಪಿಗೆ ತಕ್ಕ ರಾಜನಿಲ್ಲ!
ಎದೆಯುಬ್ಬಿಬಹ ತರುಣಿ, ಬೀದಿಯಲಿ ಬರುವಾಗ
ಮುಚ್ಚಿಕೊಳಲರಿವೆ ತುಂಡಿಲ್ಲವಲ್ಲ!!

ಹರಕು ಸೀರೆಯು ಅವಳ ಮೈಯ ಮುಚ್ಚಲು ಎಂಥ
ಸಾಹಸವ ಮಾಡಹೊರಟಿರುವುದಲ್ಲ!
ರತಿದೇವಿ ತಿರಿದುಣಲು ಬಂದಿರುವಳಲ್ಲ
ಮನ್ಮಥಗೆ ಒಂದಿನಿಸು ಭೇದವಿಲ್ಲ!

# ಅದೊ, ನಮಗಲ್ಲಿದೆ ಸದ್ - ಗತಿ !

ಇದೋ—ನಡೆ
ಅದೇ—ಕಡೆ
ಯಾರಿಗು ಕಾಣದ ಆ—ಎಡೆ!
ಅದೋ—ಪಡೆ!
ಇದೇ—ಕಡೆ!
ಅಂಜದೆ ಅಳುಕದೆ ನೀ—ನಡೆ!

ಚಲೋ—ಜೊತಿ
ಸತಿ—ಪತಿ
ಇದೊ ಕೈ ಕೈಕೊಡು ಸಮ್—ಮತಿ!
ಅಹಾ!—ಸತಿ,
ಅದೇ—ಗತಿ!
ಅದೊ, ನಮಗಲ್ಲಿದೆ ಸದ್—ಗತಿ!

ನೀನೆ—ಗುಣಿ
ನಾನೆ—ಋಣಿ
ಕವಿಯಾದೆನೆ ನಾ! ನೀನೆ—ಹೊಣಿ!
ಹೊನ್ನು,—ಮಣಿ,
ನನ್ನ—ಗಿಣಿ
ಎದೆ ಬಟ್ಟಲಕೊ, ಹೀರಿ—ತಣಿ!

ಜೀವ— ಬಲ
ಯಾಕೆ— ಛಲ !
ಯಾರಿಗು ಇಲ್ಲವು ನಿರ್— ಬಲ !
ಪ್ರೇಮ— ಫಲ .
ನೀನೆ— ಹೊಲ
ಬೆಳೆ ಹುಲುಸಾಗಲಿ ನನ್ನ— ಕುಲ !!

# ಕಣ್ಮರೆಯಾದ—ಗೆ

ಕನಸಿನಾಗ ಬಂದೇಕೆ ಬಳಲಿ
ಕಣ್ಣೀರ ಕರೆವೆ ನಳಿನಿ!
ಮನಸಿನಾಳಕೆ ಇಳಿದು ತಳವನು
ಕಲಕಬೇಡ ತರುಣಿ!

ಜನಕನಾಣತಿ ಮನಕೆ ತಾರದೆ
ಕನಕವನ್ನು ನಚ್ಚಿ!
ಬನದ ಹುಲ್ಲೆ ತಾ ಬಲೆಗೆ ಬಿದ್ದಿತೊ
ಅಂತೆಯಾದೆ ಹುಚ್ಚಿ.

ನಿನ್ನ ರೂಪು ನನಗೇಕೆ ತೋರುವೆ?
ಬೇಡ ಬೇಡ ಎಂಬೆ!
ಚಿನ್ನ ಚೆಲುವೆಯೆ ಕೊರಗಬೇಡ ನೀ-
ನೆನ್ನ ಕಣ್ಣ ಗೊಂಬೆ!

ಚಿನ್ನವಾಯಿತೆ ನಿನ್ನ ಜೀವಕೆ
ಅಂತ್ಯ ಕಾಲ ತಾನು!
ಮುನ್ನ ಮರೆದೆ ನೀ ಬನ್ನ ಬಡದಿರು
ಇನ್ನು ಮಾಡಲೇನು!

ತಾಯಿ ಸತ್ತ ಮೇಲಾರುವರುಷದ
ಹುಡುಗಿ ನೀನು ಇದ್ದೆ,
ತಾಯ ಮರೆಸುತ ಕಂದ ನಿನ್ನನು
ಪೊರೆದನಂದು ತಂದೆ.

ತಂದೆ ಹೊರಟನೌ, ಇಹವ ತೊರೆದನೌ
ನೀನು ಬಲೆಗೆ ಬಿದ್ದೆ!
ಮುಂದೆ ಮರೆದು ನೀ ತಂದೆಮಾತನು
ದುಃಖದಾಗ ಬೆಂದೆ!

ಒಡವೆಯಾಶಗೆ ಪಡೆದುಕೊಂಡೆ ನೀ
ಕಡೆಯಲೊಬ್ಬನನ್ನು!
ಕಡೆಗೆ ಕಂಡೆಯ ಮನದಿ ನಟ್ಟಿಯ
ಹೊನ್ನ ಮೋಸವನ್ನು!

ಮಾರಿಕೊಂಡಿತೆ ಕೇರಿಕೊಂಡಿತೆ
ತಂದೆ ಬಳಗ ನಿನ್ನ,
ಜಾರಿಕೊಂಡಿತೇ ತೂರಿಕೊಂಡಿತೇ
ಮರೆದು ಎಲ್ಲ ಮುನ್ನ!

ಚಿನ್ನದೆಳೆಯ ಬಲೆಯನ್ನು ಬೀಸುತ
ಹಿಡಿದು ಕೊಂದರೇನೆ!
ಚೆನ್ನೆ ನಿನ್ನ ಎಳೆ ಬಾಳೆಮುಯ್ಯು
ಬರಲಾಗಿ ಬಿಟ್ಟಿತೇನೆ!!

ಮರಣ ಸಜ್ಜೆಮೇಲ್ ನರಳುತಿದ್ದೆ ನೀ
    ನಾನು ನೋಡುವಾಗ,
ಹುರುಳಿಪೋದವೇ ಕಣ್ಣ ಪನಿಗಳೀ
    ಬಾಡು ಗೆನ್ನೆಮೇಗ!

ಬಾಧೆ ಪಟ್ಟೆಯಾ, ನೊಂದು ಕೆಟ್ಟೆಯಾ,
    ನೋಳ್ಪರಿಲ್ಲದೊಯ್ತೇ!
ಭೇದ ತೊಟ್ಟರೆ, ಮೋದ ಪಟ್ಟರೆ
    ಅದಕೆ ನೊಂದುದಾಯ್ತೆ!

ತಿರುಗಿ ನೆನೆದೆಯ, ಮರುಗಿ ನೊಂದೆಯ
    ಹಿಂದಿನೆಲ್ಲವನ್ನು?
ಮರುಗಿದೇಕೆ ನೀ, ಕೊರಗಿದೇಕೆ ನೀ
    ಉಂಡೆ ಪಡೆದುದನ್ನು!!

ಕನಸಿನಾಗ ಬಂದೇಕೆ ಬಳಲಿ
    ಕಣ್ಣೀರ ಕರೆವೆ ನಳಿನಿ!
ಮನಸಿನಾಳಕೆ ಇಳಿದು ತಳವನು
    ಕಲಕಬೇಡ ತರುಣಿ!

# ಪ್ರೇಮಬಂಧ*

ಬರಿ ಸುಳ್ಳು ಕಥೆಯಲ್ಲ; ಸತ್ಯಕಳಿವೆಂದಿಲ್ಲ!
ಗಂಡು ಹೆಣ್ಣಿನ ಕರುಳ ದನಿಯ ಮಾರುಲಿಯಷ್ಟೆ.
ಹಿರಿಯಕುಂಬಳಗುಂಟಿಗದುಯೇನು ದೂರಲ್ಲ
ಜಗಳೂರ ಸಂತೆ. ನೀವ್ ಕೇಳಿ ಭೋ ಚೇಷ್ಟೆ
ಎಂದೆಂದಿಗೂ ಅಲ್ಲ! ಬಿಸಿಲ ಬೇಗೆಗೆ ಬೆಂದು,
ನೆಳಲಿನಾಶ್ರಯಕೆಂದು ಬಂದೆ, ಕಂಡಿತು ಒಂದು
ತುಂಡು ಕಾಗದ ಪತ್ರ! ಬರೆದಿದ್ದಿತದರಲ್ಲಿ:
"ದುಡುಕದಿರು, ಓ, ಲಲಿತೆ, ಉಸಿರ ಕಡೆ ಮಾಡದಿರು
ನಿನ್ನ ನಿಶ್ಚಲ ಪ್ರೇಮಕಿಲ್ಲದಾಗಿಡೆ ಪಾರು!
ತಿಳಿಯುವುದು ನನ್ನದೆಂದೆಂದಿಗೂ ಕಿರಿದಲ್ಲ!
ನಿನ್ನ ತಾಯ್‌ತಂದೆಗಳ ಇಷ್ಟ ಬೇರಾದರೇಂ?
ಬ್ರಹ್ಮ ಹಾಕಿದ ಗಂಟು ಸಡಿಲೆಂದು ತಿಳಿದಿಯೇಂ?
ಅಲ್ಲ! ತಡೆ, ಹಾರದಿರು, ಬಂದು ಕೇಳುವೆ ನಾನೆ,
ನೀ ದುಡುಕೆ ಜಗವೆಲ್ಲ ನನ್ನ ಪಾಲಿಗೆ ಕಾನೆ!"

---

*ಒಂದು ಸಿಕ್ಕ ಪತ್ರದ ಆಧಾರದಿಂದ.

## ಮಳೆರಾಯಗೆ ಕರೆ

ಜಿನುಗುತೊಮ್ಮೊ
ಇಳಿಯುತೊಮ್ಮೊ
ಸುರಿಯುತೊಮ್ಮೊ
ಬಾರೊ ನೀ—ಈ
ಜಗವ ತೊಯ್ಯೊ ನೀ ||—

ಜಗವ ಸುತ್ತಿ ಸುಳಿದು ಬಾರ
ಜನದ ಸುಖದ ಸಿರಿಯೆ ಬಾರ
ಮೋಡವಾಗಿ ಮೂಡಿ ಬಾರ
ಸೋನೆಯಾಗಿ ಸುರಿದು ಬಾರ
ಶಾಂತಿ ಸಿರಿಯ ದೊರೆಯೆ ಬಾರ
ತಿರೆಯ ಸೇರು ನೀ—ಈ
ಜಗವ ತೊಯ್ಯೊ ನೀ—

ಅರಳೆ ಮೋಡ ಹಾಸು ಮೋಡ
ಕರಿಯ ಮೋಡ ಗಿರಿಯ ಮೋಡ
ಎಲ್ಲ ಕೂಡಿ ತಾಳ ಮಾಡ
ಜಗದ ಜೀವ ನೀನೆ ನೋಡ
ಸುರಿದು ಬಾರೊ ನೀ—ಈ........

## ಬಳ್ಳಾರಿಯ - ಬೆಳಗು

ಗುಡ್ಡ ಬೆಟ್ಟಗಳನು ಸೇರಿ
ಕಾಡು ಮೇಡುಗಳಲಿ ಹಾರಿ
ಮರಳುಗಾಡುಗಳಲಿ ಸೋರಿ
ಜಲಧಿ ಜಲವ ಹೀರಿ ಹೀರಿ
ಕಾರು ಬಾರೊ ನೀ—ಈ........

ಅನ್ನದೇವ ನೀನೆ ಆಗಿ
ಹೊನ್ನ ಮಳೆಯ ರೂಪವಾಗಿ
ಬನ್ನ ಬಡುವ ಜಗಕೆ ತೂಗಿ
ಮುತ್ತನಿಡಿದ ತೇರು ಆಗಿ
ಸಾಗಿ ಬಾರೊ ನೀ—ಈ........

ಲೋಕ ಲೋಕಗಳಲಿ ನೀರು
ಸಾಕು ಸಾಕು ಎನಲಿ ಕಾರು
ಬಾನ ಬೊಗಸೆಯಿಂದ ಜಾರು
ಜೀಕು ಜಿಯ್ಯೊ ಎನಲಿ ಪಯಿರು
ಇಳಿದು ಬಾರೊ ನೀ—ಈ........

ಗಿರಿಯ ಶಿಖರಗಳಲಿ ಸುರಿದು
ಕಲ್ಲು ಬಂಡೆಗಳಲಿ ಹರಿದು
ತಾನ ತಾನ ತಾನವಾಗಿ
ಬಳುಕಿ ಬಾಗಿ ಹೊಳೆಯು ಆಗಿ
ಬಯಲ ಬೆಳೆಗೆ ಭಾಗ್ಯವಾಗಿ
ಸಾಗಿ ಬಾರೊ ನೀ—ಈ........

## ಬಳ್ಳಾರಿಯ - ಬೆಳಗು

ಹಳ್ಳ ಕೊಳ್ಳ ಹರಿದು ಹರಿದು
ಕೆರೆಯ ಕೋಡಿ ಸುರಿದು ಸುರಿದು
ಧರಣಿ ಮತ್ತೆ ಮತ್ತೆ ತೊಯ್ದು
ಬೆಳೆಯು ಇಳೆಯ ಮುಗಿಲ ನೆಯ್ದು
ಬಾಳ ಬೆಳಗಲಿ!—
ಬಾಳ ಬೆಳಗಲಿ!

ತರುಗಳೆಲ್ಲ ಹೂತು ಕಾತು
ಅರಲು ಹಣ್ಣುಗಳನು ಹೊತ್ತು
ಇಳೆಗೆ ಬಾಗಿ ತೂಗಿ ತೂಗಿ
ಸೂರೆಗೈಯಲಿ!—
ಸೂರೆಗೈಯಲಿ!

ಪಕ್ಕಿವಿಂಡು ನಲಿದು ಹಾಡಿ,
ಭೃಂಗ ಕೋಟಿ ಅಲರ ಕೂಡಿ,
ಪಕಳೆಗಳಲಿ ನಾಂಟ್ಯವಾಡಿ
ಜೇನ ಸುರಿಸಲಿ!—
ಜೇನ ಸುರಿಸಲಿ!

ಆವು ಚಿಗಿದು ಹಾರುತಿರಲಿ
ಸೋಗೆ ಕುಣಿದು ಹಾಡುತಿರಲಿ
ರೈತ ಸುಗ್ಗಿ ಹಾಡಿ ಬರಲಿ
ಇಳೆಗೆ ಸಗ್ಗವಿಳಿದು ಬರಲಿ
ಸುಖವ ತೋರಲಿ!—
ಸುಖವ ತೋರಲಿ!

## ಬಳ್ಳಾರಿಯ - ಬೆಳಗು

ಮಳೆಯ ಬಿಲ್ಲು ಮೂಡುತಿರಲಿ
ಕವಿಯ ಮನವ ಕುಣಿಸುತಿರಲಿ
ಕಬ್ಬವೆಣ್ಣು ಒಲಿದು ಬರಲಿ
ಕವಿತೆ ಹರಿಯಲಿ!—
ಕವಿತೆ ಹರಿಯಲಿ!

ಏಳು ಬಣ್ಣ ತಳೆದ ಬಿಲ್ಲು
"ಬೆಳಕದೊಂದೆ ಅಲ್ಲು ಇಲ್ಲು!
ದೇವನೊಬ್ಬ ನಾಮ ಹಲವು
ಎಂಬ ಸೊಲ್ಲು ಇದಕೆ ಗೆಲವು"
ಎನುತ ಸಾರಲಿ
ಮಣಿದು ಬಾಗಲಿ.—

## ಮೋಡಕ್ಕೆ ಮೊರೆ

ತಿಳಿನೀಲಿಯಃ ಸಿರಿ ಆಗಸದೊಳಗೆ
ಬಿಳಿಮುಗಿಲಿನ ಸಂತೆ!
ಬುವಿಯಂಗಣದಲಿ ಜನಗಳ ಮಧ್ಯೆ
ಕರಿನೀರಿನ ಚಿಂತೆ!!

ಬಾರೈ ಮೇಘವೆ, ಜೀವ ಸಮೀರ,
ಎಮ್ಮಿರುವಿನ ಸಾರ;
ಗಿಡ ಮರ ಬಳ್ಳಿಗೆ ಸುರಿಯೈ ನೀರ
ಸರಿಯುಲಿ ಬರ ದೂರ.

ನಿನ್ನಯ ಬರುವನು ಹಾರೈಸಿದ ಜಗ
ಹಿರಿ ಹಿರಿ ಹಿಗ್ಗುವುದು!
ತರುನಿಕರವು ಹೂ ಕಾಯ್ಗಳ ಹೊತ್ತು
ನೆಲದೆಡೆ ಜಗ್ಗುವುದು!

ನೀನಿಲ್ಲದೆ ಇಳೆ ಕಳೆಗುಂದಿತು ಬೆಳೆ
ಕತ್ತೆತ್ತದು ಮತ್ತೆ!
ನೀ ಬರದಿರೆ ಜಗ ತಲ್ಲಣಗೊಳುತಿದೆ,
ಜೀವನಕಿದೆ ಳತ್ತೆ!

ಬಂದಿತು ಮಳೆತಾ, ಬಂದಿತು ಮಳೆತಾ,
ಎಂಬುದರೊಳೆ ನೀನು,
ಅಂಜುತ ಗಾಳಿಗೆ ಓಡುವಿಯಲ್ಲೊ,
ಕಾಂಬುದು ಬರಿ ಬಾನು!

ಝಮುಝುಮು ಝಮುಝುಮು ಸುರಿಯ್ಯೆ ನೀರ
ಹರಿಯಲಿ ತೊರೆ ನುಗ್ಗಿ!
ನೆಲದಮ್ಮನು ಉಟ್ಕೊನಿಯಲಿ ಹಸುರಿನ
ಸೀರೆಯ ಬಲು ಹಿಗ್ಗಿ!

ಹಸುರಿನ, ಕೆಂಪಿನ ನೀಲಿಯ ಹೂಗಳ
ಕುಪ್ಪುಸವನು ತೊಟ್ಟು,
ಗಿಳಿ, ಕೋಗಿಲೆ, ನವಿಲಾಳಿಯ ಪದಗಳ
ಕೇಳಲಿ ಮನವಿಟ್ಟು!

ಬಾಂದಳದಲಿ ನೀ ತೇಲುತ ನಡೆದರೆ
ಎಮ್ಮಯ ಪಾಡೇನು?
ಬಾಂಧವನಾಗಿಹೆ ರೈತಾಳಿಗೆ ನಿಜ
ಸಿರಿ ಬೊಕ್ಕಸ ನೀನು!!

ನೆಲದಮ್ಮನ ನೀ ನೋಳಿಯುತ ಬರಲೀ-
ಬನಮತಿ ನಲಿಯುವಳು
ತೆಂಗಿನ ಕಂಗಿನ ತಾಳೆಯ ಬಾಳೆಯ
ಚವರಿಯ ಬೀಸುವಳು.

ತಂಗಾಳಿಗೆ ತೊನೆದಾಡುವ ತೆನೆಗಳ
ವಂದನೆ ನಿನಗಿಹುದು!
ಇನಿವಣ್ಗಳ ತಿಂದುಲಿಯುವ ಖಗಗಳ
ಮಂಗಳ ಸ್ವನವಿಹುದು!

ನಿಲ್ಲದೆ ಬಾರ, ಕಳೆಯನು ಬೀರ
ಜಗವನು ಸುತ್ತುತ್ತ!
ಎಲ್ಲವು ನಿನ್ನಗೆ ಋಣಿಯಾಗಿದೆ ಬಾ
ತೂರುತ ಹನಿಮುತ್ತ!!—

## ಮೆಚ್ಚಿನ ಹಳ್ಳಿ - ನಚ್ಚಿನ ತಾಯಿ

ಬಾರೊ ಗೆಳೆಯ ನಗರವಾಸಿ
ತಿಳಿದು ನೋಡೆ ನರಕವಾಸಿ!
ಹಳ್ಳಿ ಬಾಳ ಚೆಲುವ ಕಂಡು
ಸಗ್ಗದೊಲವ ಸೂರೆಗೊಂಡು,
ಬ್ರಹ್ಮನೊರೆದ ಕಾವ್ಯವನ್ನ
ನಿನ್ನ ಮನವು ತಣಿಯುವನ್ನ
ಓದಿ, ಓದಿ, ಓದಿ ಮತ್ತೆ
ಎದೆಯ ಅಲರಮುರಳಿಸು
ಸಂದ ಸುಧೆಯ ಭುಂಜಿಸು.

ನಾವು ಬಡವರಾದರೇನು,
ನಮ್ಮ ಎದೆಯು ಚಿಕ್ಕದೇನು?
ನಮ್ಮ ಬರುವಿನಾದಿಯನ್ನೆ
ಅಮ್ಮನಿಂತು ಕಾಯುತಿಹಳು:
ಕರಿಯ ಎಮ್ಮೆ ಗಿಣ್ಣಗಡುಬು
ಮಾಡಿ ಚೀನಿ ಕುಂಬ್ಳ ಬೇಸಿ
ಎಳ್ಳನ್ಹಚ್ಚಿ ರೊಟ್ಟಿ ಸುಟ್ಟು;—
ಮೂಳಬಸಲಿ ಸಾಕುವಂತ
ರೊಟ್ಟಿ ಗೋರ್ಜಿ ಗೊಟ್ನಗೋರ್ಜಿ

ಕೀಳು ಅರಿವೆ ದಡಿಯ ಅರಿವೆ
ಉಳಿಯ ಪಲಕ ಸೀಯ ಪಲಕ
ನಾರಬಳಿಯ ರಾಜಗಿರಿಯ
ಗಲ್ಲ ಗೋಣಿ ಪಂಜ ಗೋಣಿ
ಕೋಲು ಅನ್ನೆ ಹೊನ್ನು ಗೊನ್ನೆ
ಸಣವಿಸೊಪ್ಪು ಹಾಲೆ ಸೊಪ್ಪು
ಸಬ್ಬಾಕ್ಷಿ ಮೆಂತೆ ಪಲ್ಲೆ ;—
ಮುಳ್ಳುಬದನೆ ಚಪ್ಪುಬದನೆ
ಚಗಚೆಕಾಯಿ ನುಗ್ಗಿಕಾಯಿ
ಜವಳಿಕಾಯಿ ಕವಳಿಕಾಯಿ
ಈರೆಕಾಯಿ ಸೋರೆಕಾಯಿ
ಬೆಂಡೆಕಾಯಿ ತೊಂಡೆಕಾಯಿ
ಸೌತೆಕಾಯಿ ಸೆಂಬೆಕಾಯಿ
ಕಾರೆಕಾಯಿ ಕಾರ್ಚಿಕಾಯಿ
ಆಗ್ಲಕಾಯಿ ಅವ್ರೆಕಾಯಿ
ಪಟ್ಲಕಾಯಿ ತೊಟ್ಲಕಾಯಿ
ಎಲ್ಲ ಬಗೆಯ ಪಲ್ಲೆ ಮಾಡಿ ;—
ರುದ್ರಗಂಚಿ ಕರಿಯಕಂಚಿ
ದಡ್ಲಿಕಾಯಿ ಲಿಂಬೆಕಾಯಿ
ಕವಳಿಕಾಯಿ ಚೆಳ್ಳಿಕಾಯಿ
ಮಾವ್ನಕಾಯಿ ಹುಣ್ಸೆಕಾಯಿ
ನಾನ ಬಗೆಯ ಉಪ್ನಕಾಯಿ ;—
ಹೆತ್ತ ತುಪ್ಪ ಗಟ್ಟಿ ಮೊಸರು

ಕೆಂಪು ಕೆನೆಯ ಮಂದ ಹಾಲು
(ಸಕ್ರಿ ಮಾತ್ರ ಇಲ್ಲ ಗೆಳೆಯ)
ಶುಂಠಿ ಬೆರೆವ ಬೆಲ್ಲ ಹಾಲು
(ಕಳವೆಯಲ್ಲ) ನವಣೆಯನ್ನ
ಹಳ್ಳಿ ಜನರಿಗದುವೆ ಚನ್ನ!
ಜೋಳ, ರಾಗಿ ಸಜ್ಜೆ ಕಡುಬು
ಜೋಳದಕ್ಕಿ ಹೊಯ್ಯಿಗಡುಬು
ಆದರುಗಡುಬು, ಪದರುಗಡುಬು
ತೊಗರಿಬೇಳೆ ಕರಿಯುಗಡುಬು,........
(ಏಕೆ ಗೆಳೆಯ ಕಳ್ಳ ನಗೆಯ
ಒಳಗೆ ಒಳಗೆ ನುಂಗಿಕೊಳುವೆ!)
ಇನ್ನು ಏನೊ ಏನೊ ಮಾಡಿ
ನಮ್ಮನೆಲ್ಲ ಉಣ್ಣಬಡಿಸಿ,
ಮನದಿ ಮೋದಗೊಳ್ವಳು
ಕವನ ಹಾಡೆ ಕೇಳ್ವಳು.

ತಾಯಿಗಿಂತ ಯಾರು ಹೆಚ್ಚು
ಯಾರು ಹೆಚ್ಚು ತಾಯಿಗಿಂತ
ಮೂರು ಲೋಕ ಸುತ್ತಿ ಬಂದ-
ರಾರು ಇಲ್ಲ ತಾಯಿಗ್ಹೆಚ್ಚು!
'ಅಮ್ಮ' ಎಂದು ನೆನೆದು ನಮ್ಮ
ಬಾಳ ಮೊದಲ ಮಾಡಬೇಕು!
'ಅಮ್ಮ' ಎಂದು ನೆನೆದು ನಮ್ಮ

ಉಸಿರು ಕಡೆಯ ಕಾಣಬೇಕು!
ಜಗದ ಬೆಳಕ ಕಾಣಗೊಟ್ಟು
ಬಾಳ ಬೆಳೆಗೆ ಜೀವಕೊಟ್ಟು
ನಾನು ಹಿರಿಯನಾಗಲೆಂದು
ತಾನೆ ಸತತ ದುಡಿಯುತಿಹಳು!
ಎರಡು ತುತ್ತಿನಲ್ಲಿ ಒಂದು
ತುತ್ತು ನನ್ನ ಪಾಲಿಗಿಟ್ಟು
ಕಷ್ಟ ಕೋಟಿ ಹೊತ್ತರೂನು
ಹೊರಗೆ ಮಾತ್ರ ತೋರಲಿಲ್ಲ!
ಅದಕೆ ಕೇಳು, ತಾಯ ಹೆಸರು
ಭೂಮಿ ತಾಯಿಗಿಂತ ಹಸುರು!

* * *

ನಮ್ಮ ಹೊಲಕೆ ಬಾರೊ ಗೆಳೆಯ,
ನೋಡಿ ಕುಣಿಯೊ ಶಾಂತಿ ಸಿರಿಯ;
ನಾನು ನಗರ ಸೇರ್ವ ಮುನ್ನ
ಕಿರಿಯನಾಗಿ ಮಾಡಿದ್ದನ್ನ
ಹೇಳ್ವೆ ಕೊಂಚ ಲಾಲಿಸು
ಹಳ್ಳಿ ಬಾಳಿಗೋಲಿಸು!

ನಮ್ಮ ಊರ ರೈತ ಬಳಗ-
ದಲ್ಲಿ ಬೆರೆತು ಆಟವಾಡಿ,
ಅಡವಿಯಿಂದ ಸೌದೆ ಹೊತ್ತು

ಎಮ್ಮೆ, ಆವು, ಕೋಣ, ಎತ್ತು
ಮೇಸಿ ಹುಲ್ಲು ಹೊರೆಯ ಹೊತ್ತು ;
ಮಾಮರಂಗಳಲ್ಲಿ ಓಡಿ,
ಬರಮು ಬಸವರನ್ನು ಕೂಡಿ,
ಕಲ್ಲನೆಸೆದು ಹಣ್ಣನಾಯ್ದು !
ಬುಟ್ಟಿ ತುಂಬಿ ಮನೆಗೆ ಹೊತ್ತು ;—

ಜೋಳ, ರಾಗಿ ಬೀಜ ಬಿತ್ತಿ,
ಬಾವಿಯಿಂದ ಏತ ಎತ್ತಿ,
ನೀರನೆರೆದು ಬೇಲಿ ಸುತ್ತಿ,
ಹೊಲದ ಮಧ್ಯೆ ಮಂಚ ಹತ್ತಿ,
ಹಾಲು ಬೆಳಸೆ ತೆನೆಯ ಮುತ್ತಿ
ಹಕ್ಕಿ ಬಳಗ ಕೊಕ್ಕನಿಕ್ಕಿ
ಚೀವುತಿರಲು ಕವಣೆ ಬೀಸಿ,
'ಹೋ, ಹೋ, ಹೋ' ಎಂದು
ಬಾಗಿ, ಕೂಗಿ ನಾನು ಹೊತ್ತು-
ಕಳೆಯುವಾಗ ತಾಯಿ ಹೊತ್ತು
ತಂದ ಬುತ್ತಿ ಉಣ್ಣುತಿದ್ದೆ.

ರಾತ್ರಿವೇಳೆ, ಕೇಳು ಗೆಳೆಯ,
ಕಣ್ಣು ಕಡಿವ ಕತ್ತಲಲ್ಲಿ
ಮೈಯನಿಡಿವ ಮೌನದಲ್ಲಿ
ಹೊಲದ ಕಾವಲಿಂಗೆ ನಾನು
ತಂದೆ ಕೂಡೆ ಹೋಗುತಿದ್ದೆ.

ಆಹ!
ಏನು ಚೆಲುವು, ಏನು ಗೆಲುವು
ರಾತ್ರಿವೇಳೆ ಬಯಲ ಬಾಳು!
ತಿಳಿಯ ನೀಲಿ ಗಗನದಲ್ಲಿ
ಚುಕ್ಕೆ ಬಳಗ ಪರಿಸೆ ಪರಿಸೆ!
ಮಂದ ಗಾಳಿ ಗಂಧ ಹೊತ್ತು
ಬೆಳೆಯ ಮೇಲೆ ಬೀಸಿ ಬರಲು
ತೀಡ್ವ ತೆನೆಯ ಸುಯಿಲು ನಾದ
ನನ್ನ ದನಿಯು ಕೂಡುತಿತ್ತು!
ಕತ್ತಲಲ್ಲಿ ಕೈಯ ಬೆಳಕು
ಕಾವದೇವನಾಗೆಯಿತ್ತು!
ಇನ್ನು ಹೇಗೊ ಇನ್ನು ಹೇಗೊ
ಹೇಳಿದಷ್ಟು ಇಹುದು ಗೆಳೆಯ
(ಅಂತು ಎದೆಯ ಉದ್ದಬೆಳೆದೆ)—
ನನ್ನ ಜೀವ ಪಾಕಿಗಾಗಿ
ನನ್ನ ತಾಯಿ ಸೊರಗುತಿಹಳು!!
ದುಡಿವುದೊಂದೆ ತಾಯ ಬದುಕು!
ಆಕೆಗಿನಿತು ಆಸರಿಲ್ಲ
ದುಡಿಮೆಯಲ್ಲಿ ಬೇಸರಿಲ್ಲ!
ಬೆಳ್ಳಿ ಮೂಡಿದಾಗಿನಿಂದ
ಹಳ್ಳಿ ಗೊರಕೆ ಹೊಡೆಯುವನ್ನ
ತಾಸು ಬಿಡದೆ ಕೆಲಸ ಮಾಡಿ,
ಬಿತ್ತಿ ಬೆಳೆದು ಕೊಯ್ದು ಒಕ್ಕಿ

ಕಾಳು ಕಡಿಯು ಕೂಡಿ ತಂದು
ಬಿಟ್ಟು ಬಿಡದೆ ಹೊತ್ತು ಮಾರಿ;
ಹರಕು ಹರಕು ಸೀರೆಯುಟ್ಟು
ಕಾಸು ಕಾಸು ಕೂಡಿಸಿಟ್ಟು
ನನ್ನ ಜೇಬ ತುಂಬುತಿಹಳು!
ಇಳೆಯ ಗೆಳೆಯರೆಲ್ಲರಿಂಥ
ತಾಯ ಪಡೆದು ಬಾಳಲಂತ
ತುಂಬಿದೆದೆಯ ಆಸೆ ಇಹುದು!
ತಾಯ ಮರೆಯದಂತ ಬುದ್ಧಿ
ಬೇರುಗೊಳಲಿ, ಕಾರ್ಯ ಸಿದ್ಧಿ-
ಯಾಗಿ ಬರಲಿ, ಒಂದೆ ಆಸೆ
ಜಗದ ಜೀವ ಒಂದೆ ತಾಸೆ!!

* * *

ಸಂಜೆ ಸಾರಿತು ಗೆಳೆಯ
ನೋಡಿಯಾಯಿತು ಬೆಳೆಯ
ಸಾಗೋಣ ಮನೆಗಿನ್ನು ದಾರಿ ಬಳಸಿ;
ರೈತಬಳಗದ ನಡುವೆ
ಕಾಲ ಕಳೆಯುವ ಮತ್ತೆ
ಹದನಾದ ಸವಿಮಾತ ಮಳೆಯ ಸುರಿಸಿ!



"ಕೇಳಿ ಧನಿಕ ನಿಮ್ಮ ಎದೆಯು
ಶಿಲೆಯ ಸಖನೆ ಹೇಗೆ ಹೇಳಿ—"……

# ಕಲ್ಲ ಎದೆಯೂ ಕರಗಿತು!

ಬಾರೆ ಲಲಿತ ಸಾಕು ಬದುಕು
ನಿನಗೆ ಬೇಸರಿಲ್ಲ!
ಕುಳಿತುಕೊಳ್ಳೆ, ಕೇಳೆ ನಲ್ಲೆ,
ನಮ್ಮ ಬದುಕೆ ಬೆಲ್ಲ!!

ಕಂಡ ದೃಶ್ಯ ಹೇಳಬೇಕೆ?
ಎದೆಗೆ ಮಾತ್ರ ಮರುಕ!
ಆದರೇನು ಹೇಳತೀನಿ
ನೀನು ಕೇಳೋತನಕ!

ಗುಡಿಸಲಾದರೇನು ಮಾತ್ರ!!
ಹಳೆಯ ಗರಿಯ ಹೊದಿಕೆ!
ಸುತ್ತು ತಪಸು ಮಾಡುತ್ತೈತೆ,
ಕಂಡಿ ತುಂಬ, ನೆರಕೆ!!

ನಿಂತಿದಾನೆ ಬಡಕ ಬಡಕ
ಉಟ್ಟಿದಾನೆ ತುಣುಕ ತುಣುಕ!
ಸುತ್ತುಗಟ್ಟಿ ಮಕ್ಕಳೆಲ್ಲ:
"ಅಪ್ಪ ಅನ್ನ ಆಯಿತಲ್ಲ,
ಅವ್ವ ಮಾತ್ರ ಉಣ್ಣಲಿಲ್ಲ

ನಿನ್ನಗಿಷ್ಟು ಉಳಿಯಲಿಲ್ಲ
ನಮ್ಮಗಳಿಗೆ ಸಾಲಲಿಲ್ಲ"
ಎಂದು ಕೂಗಿಕೊಳ್ಳುವಾಗ
ಮಡದಿ ಒಳಗೆ ಬಳಲುತಿದ್ದು
ಮೂರು ದಿನವು ಉಣ್ಣಲಿಲ್ಲ;
ಧನಿಕ ಬಂದು ದರ್ಪದಿಂದ,
"ಕಳ್ಳ ಭಡವ ನಮ್ಮ ರೊಕ್ಕ
ಕೊಟ್ಟು ಮುಂದೆ ನಿಲ್ಲು, ಸೊಕ್ಕ
ಮುರಿದು ಹಾಕಿ, ನಿನಗೆ ತಕ್ಕ
ದಂಡ ಹೇರಬೇಕೆ, ಹೇಗೆ?"
ಎಂದು ಗುಡುಗು ಹಾಕುತಿರುವ
ಬೆಲೆಯ ವಸ್ತ್ರ ಧರಿಸಿ ಮೆರೆವ
ಜವನ ರೂಪುವೆತ್ತ ಧನಿಕ-
ನನ್ನು ನೋಡಿ, ನೋಡಿ ಬಡವ
ಕನಲಿ ಕೆಂಡದಂತೆಯಾಗಿ,
ಆತನೆಡೆಗೆ ನೋಡುತ
ಎದೆಯ ಘಟ್ಟಿ ಮಾಡುತ:

"ಕೇಳಿ ಧನಿಕ ನಿಮ್ಮ ಎದೆಯು
ಶಿಲೆಯ ಸಖನೆ ಹೇಗೆ, ಹೇಳಿ,
'ನಿಮಗೆ ಇನಿತು ಕರುಣವಿಲ್ಲ'
ಎಂಬ ಮಾತು ಸಟೆಯೆ ಅಲ್ಲ.
ಕಸವ ತಿಂದು ರಸವ ಮಾಡಿ,

ದುಡಿದು, ದುಡಿದು, ದುಡಿದು, ದುಡಿದು
ನಿಮ್ಮ ಚೀಲ ತುಂಬಿ ತುಂಬಿ
ನಾವು ಮೂರು ದಿನಕೆ ಮಾತ್ರ
ಉಣ್ಣಲಿಲ್ಲ ಒಂದು ಊಟ!
ಮಕ್ಕಳಿಟ್ಟುದಿಲ್ಲ ಬಟ್ಟೆ
ತುಂಬಲಿಲ್ಲ ಎಲ್ಲರ್ಹೊಟ್ಟೆ.
ಎನಗೆ ಮಕ್ಕಳೈವರಯ್ಯ
ನಿಮಗೆ ಒಂದು ಕೂಸು ಇಲ್ಲ;
ಒಳಗೆ ಸೇರು ಕಾಳು ಇಲ್ಲ
ತಿಂಗಳಾಯ್ತು ಉಪ್ಪು ಇಲ್ಲ
ದೇವಗಿನಿತು ಕರುಣವಿಲ್ಲ!
ನಮಗೆ ನಿಮಗೆ ದೇವನೊಬ್ಬ
ಎಂದ ಮೇಲೆ ನಿಮಗೆ ಮಾತ್ರ
ಬರೆದುಕೊಟ್ಟನೇನೊ ಪತ್ರ!
ತಿಳಿದು ನೋಡಿ ಕೊಂಚ ಮಾತ್ರ
ನಿಮ್ಮ ಮನೆಯ ಕಾಳು ಎಲ್ಲ
ಇಲಿಯ ಬಿಲಕೆ ಭರ್ತಿಯಾಯ್ತು;

ಕೊಳೆತ ಜೋಳ ತಿಪ್ಪೆಯೊಳಗೆ
ಬಿದ್ದು ಹೊಲಕೆ ಶಕ್ತಿಯಾಗಿ,
ಬೆಳೆದು ಮತ್ತೆ ಮತ್ತೆ ಬೆಳೆದು
ಆದರೊಳಾವು ದುಡಿದು ದುಡಿದು
ತುಂಬಿಕೊಟ್ಟರೇನು ಮಾತ್ರ

'ಊಡಲಿಕ್ಕೆ ಹಕ್ಕು ಇಲ್ಲ'
ಎಂಬ ಮಾತು ನಿಮ್ಮ ಸೂತ್ರ.

ನಾಳೆ ಸತ್ತುಹೋಗುವಾಗ
ತೊರೆದು ಎಲ್ಲ ವಿಷಯಭೋಗ
ಯಾರು ತಿನ್ನಬೇಕು ಅದನು?
ಮಕ್ಕಳಿಲ್ಲ ಮರಿಯು ಇಲ್ಲ
ಅಣ್ಣಯಿಲ್ಲ ತಮ್ಮಯಿಲ್ಲ
ನಿಮ್ಮ ಆಸೆ ಕುಂದಲಿಲ್ಲ!
ನನ್ನ ಸಾಲ ಮಾತ್ರವೆಷ್ಟು
ಕೊಟ್ಟುದಾಯ್ತು ಹತ್ತರಷ್ಟು!
ತೃಪ್ತಿಯಿಲ್ಲ ನಿಮಗೆ ಇನ್ನು.

ಬಂಡವಾಳಗಾರರೆಲ್ಲ
ನಿಮ್ಮ ಹಾಗೆ ಸೊಕ್ಕಿ ಮೆರೆದು
ನಮ್ಮ ದೇಶ ಬಡವರಿಂದ
ತುಂಬಿ ತುಂಬಿ ತುಳುಕಲಾಯ್ತು;
ನನ್ನ ನಿಮ್ಮ ಇಬ್ಬರಾತ್ಮ
ಒಂದೆಯೆಂದು ತಿಳಿಯಬೇಕು.
ಜಗದಿ ಒಗೆದ ಜೀವಿಗೆಲ್ಲ
ಸುಖದಿ ಬಾಳೆ ಹಕ್ಕು ಉಂಟು."
ಎಂಬ ಮಾತು ನಾಟಲು
ಕಲ್ಲ ಎದೆಯು ಕರಗಲು:

ಧನಿಕ ದುಃಖಭರಿತನಾಗಿ,
ಗಂಟಲೂದಿ ದೊಡ್ಡದಾಗಿ,
ತುಟಿಗಳೆರಡು ನಡುಗಿ ನಡುಗಿ,
ಕಣ್ಣು ನೀರು ತುಂಬಿ ಒಸರಿ
ದರ್ಪವೆಲ್ಲ ಹರಿದು ಹೋಗಿ;

"ದೀನಮಿತ್ರ ಕನಲಬೇಡ
ನಾನು ಇಂದಿಗರಿದೆ ನೋಡ
ಬಂಡವಾಳಗಾರರೆಲ್ಲ
ಸೊಕ್ಕಿ ಮೆರೆದರೆಂಬ ಮಾತು
ಸರ್ವಸತ್ಯ ತಿಳಿದೆನಯ್ಯ.
ಸಿರಿಯ ಮದದಿ ಮತ್ತರಾಗಿ
ಮರೆದು ಭರತಮಾತೆಯನ್ನು
ಕಣ್ಣ ಕಡೆಯ ನೋಟದಿಂದ
ನೋಡಿ ನಾವು ಕೆಟ್ಟೆವಯ್ಯ!

ಇನ್ನು ಮುಂದೆ ನಮ್ಮ ಸಿರಿಯ-
ನೆಲ್ಲ ಮಾತೆ ಸೇವೆಗಾಗಿ
ಸಲಿಸಿ ಧನ್ಯರಾಗಲಿಹೆವು,
ಕನಲಬೇಡ ಕನಲಬೇಡ
ದೀನ ಧನಿಕ ಭೇದ ಭಾವ
'ನಾನು ನೀನು' ಎಲ್ಲ ಮರೆತು,

ಮಾತೆ ಮಕ್ಕಳೆಲ್ಲರೊಂದೆ
ಎಂಬ ಭಾವವನ್ನು ತಳೆದು
ಸುಖದಿ ಮುಂದೆ ಬಾಳುವ
ಮಾತೆ ಸೊಬಗ ನೋಡುವ...."

ಏಕೆ ಲಲಿತ ಕಣ್ಣ ಒರತೆ
ನೀರ ತುಂಬಿಕೊಳುತಲಿಹವು.
ಅದಕೆ ಅಳುವೆ ಏಕೆ ಲಲಿತ,
ಹೆಣ್ಣು ಕರುಳೆ, ಅಯ್ಯೊ ಹುಚ್ಚಿ!
ಇಂಥ ಕಥೆಯು ಇನ್ನು ಮುಂದೆ
ಹೇಳಲೊಲ್ಲೆ ಕೇಳೆ ಲಲಿತ;
ಕಣ್ಣ ನೀರ ಕರೆವೆ ನೀನು,
ಬಡವ, ಬಡವಿ ಕೊಡುವುದೇನು!!

# ಬುವಿ ಇಂದು ನಾಕ!

ಬೆಳಗಾಯ್ತು! ಬೆಳಗಾಯ್ತು! ಬಂದನಹಹಾ ಬಂದ!
ಬಾಲ ಭಾಸ್ಕರ ತನ್ನ ಲಕ್ಷ ಕರಗಳ ಚಾಚಿ!
ಪಸುರುಡೆಯ ನೆಲದಾಂಬೆಯೆದೆಯ ಬಯಲಿನ ಮೇಲೆ
ಇಳಿದ ಕೊರಳಿನ ತೋರ ಮುಕ್ತಹಾರಮದೆನಲು
ಚೆಲ್ಲಿದೀ ಪೊಳೆಪೊಳೆವ ಹಿಮಮಣಿಗಳನು ಬಾಚಿ
ಎಚ್ಚರಿಸಿದನು ಜಗವ! ಭಾಸ್ಕರನ ಬೆರಳನಖ-
ದಮೃತ ಸ್ಪರ್ಶನದಿಂದೆ ನಕ್ಕಳೆನೆ ಭೂದೇವಿ
ಪಾಡುತಿವೆ ಪಕ್ಕಿವಿಂಡ್! ಬುವಿ ಇಂದು ನಾಕ!

# ತಿರೆ ಬಾನ ಬಿಟ್ಟಿಲ್ಲ!

ಬೆಟ್ಟದುದಿಯಂ ಏರಿ, ನಟ್ಟ ನೋಟವ ಬೀರಿ,
    ದಿಗ್ ದಿಗಂತವನೆಲ್ಲ ಸುತ್ತುಗಟ್ಟಿತು ಕಣ್ಣು!
    ಏನ್ ರಮ್ಯ! ಏನ್ ಸೌಮ್ಯ! ಬುಡದೊಳೇನಿದೆ ಮಣ್ಣು.
ಸತ್ಯವನು ಕಾಣುವಡೆ, ಎತ್ತರೆತ್ತರಕೇರಿ,
ಹೊರನೋಟಕುಂ ಮೀರಿ ಹರಿಸು ಒಳನೋಟವಂ.
    ಅಚ್ಚರಿಯದೇನಲ್ಲಿ? 'ತಿರೆ ಬಾನ ತೆಕ್ಕೆಯಿದೆ!'
    ಏರು ಮೇಲೇರೇರು, 'ಅಹುದು ನಿಜ, ಹಾಗೆ ಇದೆ!'
ತಿರೆ ಕಳೆದುಕೊಂಡಿಲ್ಲ ಬಾನ ಬಯಲಾಟವಂ!
ಆಕಾಶವೇನಂತೆ? ಬರಿಯ ಬಯಲದುವಂತೆ!
    ಬಯಲನೇಕಪ್ಪುತಿಹೆ, ಓ ಜಗವೆ, ಜಾರಿ!
    ಏನೆಂದೆ ಹೇಳ್ ಮತ್ತೆ, 'ಇದೆ ಸೂತ್ರಧಾರಿ!!'
ಜೀವಿಯದು ಜೀವಿಯನು ಅಪ್ಪಿಕೊಳ್ಳುವುದಂತೆ,
    ಮೈಮರೆವುದೇಕಂತೆ ಒಂದೊಂದರೊಳು ಸೇರಿ!
    ಜಗದ ಜಾಲಗಳೆಲ್ಲ ಬಾನ್ ಬಯಲ ದಾರಿ!!

## ಎರಡು ಮಾತು

ಬ್ರದ್ರನ್ ಸಂಸ್ಥೆಯು ಉದಾತ್ತ ಧ್ಯೇಯದಿಂದ ಪ್ರಾರಂಭಿಸಲ್ಪಟ್ಟದೆ. ಇದರ ಚಾಲಕರು, ಪಿ. ಎಸ್. ಕೆ. ಆಚಾರ್ಯ, ಚಾಂಡ್ರಹಳ್ಳಿ ಇವರು. ಈ ಸಂಸ್ಥೆಗೆ ಬೆಂಬಲ ವಾಗಿ ಸದಾ ಸ್ಫೂರ್ತಿ ಕೊಡುತ್ತಿರುವವರು ಮೈಸೂರಿನ ಶ್ರೀಮಾನ್ ಎಲ್. ಕೆ. ತಾತಾಚಾರ್ಯರವರು.

ಸದ್ಯ ಈ ಸಂಸ್ಥೆಯು "ಕೀರ್ತಿಕಿರಣ" ಮಾಸಿಕ ಪತ್ರಿಕೆಯನ್ನು ನಡೆಸುತ್ತಲಿದೆ. ಅಲ್ಲದೆ ಗ್ರಂಥ ಪ್ರಕಟನೆಯ ಕಾರ್ಯವನ್ನು ತುಂಬಾ ಆಸಕ್ತಿಯಿಂದ ವಹಿಸಿದೆ. ಇದರ ಮೊಟ್ಟಮೊದಲನೆಯ ಪ್ರಕಟಣೆಯೇ "ಬಳ್ಳಾರಿಯ-ಬೆಳಗು." ಸಾಹಿತ್ಯಸೇವೆಯನ್ನು ಮನವುಟ್ಟಿ ಮಾಡಬೇಕೆಂಬುದೇ ಈ ಸಂಸ್ಥೆಯ ಉತ್ಕಟೇಚ್ಛೆ. ಹೆಚ್ಚಾಗಿ, ತೆರೆಯ ಮರೆಯಲ್ಲಿ ಇರುವ ತರುಣ ಸಾಹಿತಿಗಳನ್ನು ಬೆಳಕಿಗೆ ತರಬೇಕೆಂಬುದೇ ಸಂಸ್ಥೆಯ ಮಹೋದ್ದೇಶ.

ವ್ಯವಸ್ಥಾಪಕ

ಬ್ರದ್ರನ್ ಸಂಸ್ಥೆ